

# ಚಂದಮಾಮ

ಫೆಬ್ರವರಿ 1983

★

## ಈ ಸಂಚಿಕೆಯಲ್ಲಿ



★


ಬಿಡಿ ಪ್ರತಿ ರೂ. ೧-೭೫

ವಾರ್ಷಿಕ ಚಂದಾ ರೂ. ೨೧.೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

"ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡೆ ಜಗಳವೇ ಲೇಸು" ಎಂದು ನೂರಾರು ವರ್ಷಗಳ ಹಿಂದೆಯೇ ದಾಸರು ಹಾಡಿ ಹೇಳಿದ್ದಾರೆ. ಅವರ ಬೋಧನೆಗಳನ್ನು ಕೇಳಿದರೇನೇ ಸಲ್ಲದ ಹೊಲ್ಲದ ದುಷ್ಟತನಗಳನ್ನು ಮಾಡುವ ಅಜ್ಞಾನಿಗಳು, ಜ್ಞಾನಿಗಳ ಹತ್ತಿರ ಜಗಳ ಮಾತ್ರವಲ್ಲ, ಕಳವು ಮಾಡಿದವರೂ ಸಹ ಪರಿವರ್ತನೆಗೊಳ್ಳುವರೆಂಬುದನ್ನು ಈ ಸಂಚಿಕೆಯಲ್ಲಿರುವ "ಜ್ಞಾನಿ, ಅಜ್ಞಾನಿ" ಎಂಬ ಸಣ್ಣ ಕಥೆಯಲ್ಲಿ ನೋಡುವಿರಿ.

## ಅಮರವಾಣಿ

ದ್ವಿಜಿಹ್ವೋ ಮಾನವಃ ಕ್ರೂರಃ ದ್ವಿಜಿಹ್ವೋದಪಿ ಪನ್ನಗಾತ್
ಸರ್ಪೋ ಹರತ್ಯೇಕಮೇವ ಕ್ರೂರಸ್ತು ಕುಲ ನಾಶಕಃ

ಎರಡು ನಾಲಗೆಗಳಿರುವ ಸರ್ಪಕ್ಕಿಂತಲೂ, ಅಂತಹ ಲಕ್ಷಣವಿರುವ ಮನುಷ್ಯನೇ ಹೆಚ್ಚು ಕ್ರೂರನು. ಸರ್ಪವು ಕಡಿದು ಒಬ್ಬನನ್ನೇ ಕೊಂದರೆ ಕ್ರೂರನು ವಂಶನಾಶಕ್ಕೇ ಕಾರಣನಾಗುವನು.

ಸಂಪುಟ : ೨೦ ಫೆಬ್ರವರಿ '೮೩ ಸಂಚಿಕೆ : ೨

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦








# ವ್ಯರ್ಥಮಾಡದವಳು

ಒಂದು ಮನೆಯ ಗೃಹಿಣಿಯಾದ ರಾಜಮ್ಮ ತುಂಬಾ ಮಿತವ್ಯಯದವಳು. ಯಾವ ಪದಾರ್ಥಗಳನ್ನೂ ವ್ಯರ್ಥಮಾಡುವವಳಲ್ಲ. ಒಂದು ದಿನ ಅವಳು ನೆರೆಮನೆಯ ಶಿವಣ್ಣಯ್ಯನನ್ನು ಸಕುಟುಂಬವಾಗಿ ತನ್ನ ಮನೆಯ ಭೋಜನಕ್ಕೆ ಆಹ್ವಾನಿಸಿದಳು. ಶಿವಣ್ಣಯ್ಯ ತಿಂಡಿಪೋತನೆಂದು ಎಲ್ಲರಿಗೂ ಗೊತ್ತು. ಅಂತಲೇ ರಾಜಮ್ಮ ಅಡಿಗೇ ಪದಾರ್ಥಗಳನ್ನೆಲ್ಲ ಸ್ವಲ್ಪ ಹೆಚ್ಚಾಗಿಯೇ ಮಾಡಿದಳು. ಆದರೆ ಆ ದಿನ ಶಿವಣ್ಣಯ್ಯ ಮೊದಲಾದವರ ಆರೋಗ್ಯ ಸರಿ ಇಲ್ಲದೆ, ಅವರೆಲ್ಲ ಸ್ವಲ್ಪವೇ ಊಟ ಮಾಡಿದರು. ಮಾಡಿದ ಪದಾರ್ಥಗಳು ತುಂಬಾ ಮಿಗಿಲಿದುವು. ಅತಿಥಿಗಳೆಲ್ಲ ಹೊರಟುಹೋದ ಮೇಲೆ ರಾಜಮ್ಮನ ಗಂಡ ಸೀತಾರಾಮಯ್ಯ ಉಳಿದ ಪದಾರ್ಥಗಳನ್ನು ನೋಡಿ "ಇಷ್ಟೊಂದು ಉಳಿದಿವೆಯಲ್ಲಾ!" ಎಂದು ಕಳವಳ ವ್ಯಕ್ತಪಡಿಸಿದನು.

"ಆ ಚಿಂತೆ ನಿಮಗೆ ಬೇಡ. ನಾನು ನೋಡಿಕೊಳ್ಳುತ್ತೇನೆ" ಎಂದಳು ರಾಜಮ್ಮ.

ಹೆಂಡತಿಯ ಮಿತವ್ಯಯದ ಜಾಣ್ಮೆಯನ್ನು ಚೆನ್ನಾಗಿ ತಿಳಿದಿದ್ದ ಸೀತಾರಾಮಯ್ಯನಿಗೆ, ಹೆಂಡತಿ ಅದನ್ನೆಲ್ಲ ತನ್ನಿಂದಲೇ ತಿನ್ನಿಸುವಳೇನೋ ಎಂಬ ಅನುಮಾನವಾಯಿತು. ಮರುದಿನ ಬೆಳಿಗ್ಗೆ ಅವನು ಮುಖತೊಳೆದ ಕೂಡಲೇ ಹೊಟ್ಟೆಯನ್ನು ಕೈಯಲ್ಲಿ ಹಿಡಿದು ಒಚಿಕಿಕೊಳ್ಳ ತೊಡಗಿದನು. ಏನಾಯಿತೆಂದು ಹೆಂಡತಿ ಹತ್ತಿರಬಂದು ಕೇಳಿದಾಗ, "ಯಾಕೋ ಹೊಟ್ಟೆ ನೋಯುತ್ತಾ ಇದೆ." ಎಂದನು.

ರಾಜಮ್ಮ ಗಾಬರಿಯಾಗಿ ಕೂಡಲೇ ವೈದ್ಯನನ್ನು ಬರಮಾಡಿದಳು. ವೈದ್ಯನು ಬಂದು ಸೀತಾರಾಮಯ್ಯನನ್ನು ಪರೀಕ್ಷಿಸಿ "ರಾತ್ರಿ ಏನು ತಿಂದಿರಿ?" ಎಂದು ವಿಚಾರಿಸಿದನು. "ಎಂದಿನಂತೆ ಊಟ ಮಾಡಿದೆ, ಅಷ್ಟೇ" ಎಂದನು ಸೀತಾರಾಮಯ್ಯ.

"ಹಾಗಿದ್ದರೆ ಹೊಟ್ಟೇ ನೋವು ಬರಬಾರದಲ್ಲ! ಸರಿ. ಮನೆಗೆ ಹೋಗಿ ಔಷಧ ಕಳುಹಿಸುತ್ತೇನೆ. ಈ ದಿನ ಭೋಜನ ಮಾಡಬೇಡಿ. ಸರಿ ಹೋಗುತ್ತದೆ" ಎಂದನು ವೈದ್ಯ.

ಆಗ ರಾಜಮ್ಮ ವೈದ್ಯನಿಗಾಗಿ ತಂದ ಭಕ್ಷ್ಯಭೋಜ್ಯಗಳ ರಂಗು ನೋಡಿ ವೈದ್ಯನಿಗೆ ಅನುಮಾನವಾಯಿತು. ಅವನು ಅವಸರದಿಂದ ಎದ್ದು "ಈ ದಿನ ನನಗೆ ಉಪವಾಸ ವ್ರತ. ವ್ಯತ್ಯಾಸವಾಗಿ ತಿಳಿಯ



ಬೇಡಮ್ಮ" ಎಂದು ಹೇಳಿ ಹೊರಟುಹೋದನು.

"ಅವರಿಗೆ ಉಪವಾಸವಾಯಿತು. ನಿಮಗೆ ಹೊಟ್ಟೆ ಸರಿಯಿಲ್ಲ. ಈ ಭಕ್ಷ್ಯಗಳೆಲ್ಲ. ಹೇಗೆ ಖರ್ಚಾಗುತ್ತವೋ! ನಾನೊಬ್ಬಳೇ ಎಷ್ಟು ತಿಂದೇನು!" ಎಂದಳು ರಾಜಮ್ಮ ದಿಗಿಲಿನಿಂದ.

"ಹಸಿವೆಯಿಂದಿರುವ ಯಾರನ್ನಾದರೂ ಕರೆದು ಊಟ ಹಾಕಿಬಿಡು. ಹಸಿವೆಯಾದರೆ ರುಚಿ ಗೊತ್ತಾಗುವುದಿಲ್ಲ. ನಿನಗೆ ಪುಣ್ಯವೂ ಬರುತ್ತದೆ" ಎಂದನು ಸೀತಾರಾಮಯ್ಯ.

ಅದೇ ಸರಿಯೆಂದುಕೊಂಡು ರಾಜಮ್ಮ ಬೀದಿಯ ಬದಿಗೆ ಹೋದಳು, ಆ ದಾರಿಯಾಗಿ ಹೋಗುವ ಶ್ಯಾನುಭಾಗರ ಒಕ್ಕಲಿಗನು ಕಾಣಿಸಿದನು.

"ಏನೋ, ಬಹಳ ಆಯಾಸದಿಂದ ನಡೆಯುವಿಯಲ್ಲಾ? ಹೊಟ್ಟೆಗೇನೂ ತಿನ್ನಲಿಲ್ಲವೇನೋ?" ಎಂದು ರಾಜಮ್ಮ ಅವನನ್ನು ಆಪ್ಯಾಯತೆಯಿಂದ ಮಾತಾಡಿಸಿದಳು.

"ಹೌದಮ್ಮಾ. ಗ್ರಹಚಾರದಿಂದ ಒಂದು ತಪ್ಪು ಮಾಡಿಬಿಟ್ಟೆ. ಅಯ್ಯಾ ಅವರಿಗೆ ಕೋಪಬಂದು, ನಿನ್ನೆ ಇಡೀ ದಿನ ನನ್ನನ್ನು ಕೋಣೆಯೊಳಗೆ ದೂಡಿ ಬೀಗ ಹಾಕಿ ಬಿಟ್ಟರು. ಈಗಷ್ಟೇ ಹೊರಗೆ ಬಿಟ್ಟರು." ಎಂದನು ಒಕ್ಕಲಿಗ.

"ಅಯ್ಯೋ ಪಾಪವೇ! ನಮ್ಮಲ್ಲಿ ಹಬ್ಬದ ಅಡಿಗೇ ಬೇಕಾದಷ್ಟಿದೆಯಪ್ಪ, ಊಟಮಾಡಿ ಹೋಗುವಿಯಂತೆ, ಬಾ" ಎಂದಳು ರಾಜಮ್ಮ.

ರಾಜಮ್ಮ ಒಳ ಅಂಗಳದಲ್ಲಿ ಎಲೆ ಹಾಕಿ ಒಂದೊಂದೇ ಭಕ್ಷ್ಯಗಳನ್ನು ಬಡಿಸುತ್ತಾ ಬಂದಳು. ಒಕ್ಕಲಿಗನು ಒಮ್ಮೆಗೇ ಎದ್ದುನಿಂತು, "ಓ! ಹೊತ್ತಾಗಿ ಹೋಯಿತು ಅಮ್ಮನವರೇ! ನನ್ನ ಮನೆಯವರೆಲ್ಲಾ ನನ್ನಗತಿ ಏನಾಯಿತೋ ಎಂದು ಸಾವಿರ ಕಣ್ಣುಗಳಿಂದ ಹುಡುಕಾಡಿಕೊಂಡಿದ್ದಾರು. ಇನ್ನಾವಾಗಾದರೂ ಬರುತ್ತೇನೆ, ಆಗ ಒಂದು ಮುಷ್ಟಿ ಹಾಕುವಿರಂತೆ" ಎಂದು ಹೇಳಿ ಪ್ರತ್ಯುತ್ತರಕ್ಕೂ ನಿಲ್ಲದೆ ಬೇಗಬೇಗನೆ ಹೋಗಿ ಬಿಟ್ಟನು.

ರಾಜಮ್ಮ ಸೀತಾರಾಮಯ್ಯನ ಹತ್ತಿರ ಬಂದು, "ಇದೇನ್ರೀ ವಿಚಿತ್ರ! ಮೆಲ್ಲ ಮೆಲ್ಲ ಬಂದವನು ಗಡಿಬಿಡಿಯಿಂದ ಓಡಿ ಹೋಗುತ್ತಾನೇಕೆ?" ಎಂದಳು.

"ನೀನು ಬಡಿಸಿದ್ದೆಲ್ಲಾ ನಿನ್ನೆ ಬೇಯಿಸಿದ್ದು ಅಂತ ಗೊತ್ತಾಯಿತೋ ಏನೋ?" ಎಂದನು ಸೀತಾರಾಮಯ್ಯ.

"ಹಸಿದವರಿಗೆ ರುಚಿಗೊತ್ತಾಗುವುದಿಲ್ಲ ಅಂತ ನೀವೇ ಹೇಳಿದಿರಿ ಮತ್ತೆ?" ಎಂದಳು ರಾಜಮ್ಮ.

"ನಾಲಗೆಗೆ ರುಚಿ ಗೊತ್ತಾಗದಿದ್ದರೂ ಮೂಗಿಗೆ ಗೊತ್ತಾಗುತ್ತದಷ್ಟೆ? ಅವನು ಭಿಕ್ಷುಕನೇನೂ ಅಲ್ಲವಷ್ಟೆ?" ಎಂದನು ಸೀತಾರಾಮಯ್ಯ.

ಗಂಡ ಹಾಗೆ ಹೇಳಿದ ಕೂಡಲೇ ರಾಜಮ್ಮ ಮತ್ತೆ ಬೀದಿಯಬದಿಗೆ ಹೋಗಿ ನೋಡ ತೊಡಗಿದಳು. ಒಬ್ಬ ಭಿಕ್ಷುಕನು ಆ ದಾರಿಯಾಗಿ ಬರುತ್ತ



ರಾಜಮ್ಮನನ್ನು ನೋಡಿ "ನಾಲ್ಕು ದಿನಗಳಿಂದ ಉಪವಾಸ ಇದ್ದೇನಮ್ಮಾ, ಒಂದೇ ಒಂದು ಮುಷ್ಟಿ ಅನ್ನ ನೀಡು ತಾಯೇ !" ಎಂದು ಬೇಡಿದನು.

"ಒಂದು ಮುಷ್ಟಿಗೇನು ಕರ್ಮ ! ಹೊಟ್ಟೆ ತುಂಬಾ ತಿಂದು ಹೋಗು. ಒಳಗೆ ಬಾಪ್ಪ" ಎಂದಳು ರಾಜಮ್ಮ.

ಈಸಾರಿ ರಾಜಮ್ಮ ಉಳಿದಿದ್ದ ಎಲ್ಲಾ ಪದಾರ್ಥಗಳನ್ನೂ ಎಲೆಯಲ್ಲಿ ಹಾಕಿ ತೆಗೆದುಕೊಂಡು ಬಂದು ಭಿಕ್ಷುಕನ ಮುಂದೆ ಇಟ್ಟಳು. ಅವುಗಳ ವಾಸನೆ ತಗಲಿದ ಕೂಡಲೇ, ಭಿಕ್ಷುಕನು ರಾಜಮ್ಮನನ್ನು ಬಿಟ್ಟ ಕಣ್ಣುಗಳಿಂದ ನೋಡುತ್ತ, ಹಾಗೆಯೇ ತಲೆ ತಿರುಗಿ ಬಿದ್ದನು.

ರಾಜಮ್ಮ ಗಾಬರಿಯಾಗಿ ಓಡಿ ಹೋಗಿ ಗಂಡನೊಂದಿಗೆ ಆ ಸಂಗತಿ ಹೇಳಿದಳು. ಸೀತಾರಾಮಯ್ಯ ಭಿಕ್ಷುಕನು ಸತ್ತು ಹೋದನೆಂದುಕೊಂಡು ನಾಲ್ಕನೇ ಮನೆಯಲ್ಲಿದ್ದ ಪುರೋಹಿತನ ಬಳಿಗೆ ಹೋಗಿ, "ಒಬ್ಬ ಭಿಕ್ಷುಕನು ನಮ್ಮ ಮನೆಗೆ ಬಂದು ಊಟ ಮಾಡುವುದಕ್ಕೆ ಮೊದಲು ಸತ್ತು ಹೋಗಿದ್ದಾನೆ. ಈಗ ನಾವೇನು ಪರಿಹಾರ ಮಾಡಬೇಕೆಂಬುದನ್ನು ಹೇಳಬೇಕು" ಎಂದನು.

"ಅದೇನೂ ದೊಡ್ಡ ದೋಷವಾಗುವುದಿಲ್ಲ. ಮನೆಯಲ್ಲಿ ಮಾಡಿದ ಅಡಿಗೆಯನ್ನೆಲ್ಲಾ ನನಗೇ ದಾನಮಾಡಿ ಬಿಡಿ. ಅನಾಥ ಪ್ರೇತಕ್ಕೆ ದಹನ ಸಂಸ್ಕಾರ ಮಾಡಿದರೆ ಪುಣ್ಯವೂ ಬರುತ್ತೆ. ಅಷ್ಟು ಮಾಡಿ, ಸಾಕು" ಎಂದನು ಪುರೋಹಿತ.

ಅದರಂತೆ ಪುರೋಹಿತನು ಸೀತಾರಾಮಯ್ಯನೊಂದಿಗೆ ಹೊರಟು ಬಂದು, ಬಿದ್ದಿದ್ದ ಭಿಕ್ಷುಕನನ್ನು ನೋಡಿ, "ಶವ ಆಗಲೇ ವಾಸನೆ ಹೊಡೆಯಲು ಶುರುವಾಯಿತಲ್ಲಾ !" ಎಂದನು.

"ಅದು ಶವದ ವಾಸನೆ ಅಲ್ಲ ಸ್ವಾಮಿ, ಅವನ ಮುಂದೆ ಬಡಿಸಿರುವ ಪದಾರ್ಥಗಳದು. ಅಷ್ಟೇ" ಎಂದನು ಸೀತಾರಾಮಯ್ಯ.

ಪುರೋಹಿತನು ಮೆಟ್ಟಿಬಿದ್ದು, "ಅರೆ ! ಮರೆತೆ! ಇದು ಪ್ರೇತ ಸಂಸ್ಕಾರದ ವಿಷಯವಾಯಿತು. ಇದಕ್ಕೆ ಸಂಬಂಧಿಸಿದ ದಾನವನ್ನು ನಾನು ಹಿಡಿಯಲೇ ಕೂಡದು. ಅದು ಮಾತ್ರವಲ್ಲ, ಇವನು ಹಸಿವೆಯಿಂದ ಆಕ್ರೋಶ ಮಾಡಿ ಸತ್ತಿದ್ದಾನೆ. ಆದ್ದರಿಂದ ಮನೆಯಲ್ಲಿ ಅಡಿಗೆ ಮಾಡಿರುವ ಪದಾರ್ಥಗಳೆಲ್ಲವನ್ನೂ ಶವದೊಂದಿಗೆ ಚಿತೆಯಲ್ಲಿ ಹಾಕಿದರಷ್ಟೇ ಇವನ ಆತ್ಮಕ್ಕೆ ಶಾಂತಿ" ಎಂದನು.

ಸೀತಾರಾಮಯ್ಯ ಸಂತೋಷದಿಂದ, "ಮೊದಲು ಇರುವ ಭಕ್ಷ್ಯಭೋಜ್ಯಗಳನ್ನೆಲ್ಲಾ ಚಿತೆಯಲ್ಲಿ ಹಾಕಿ ಆಮೇಲೆ ಇವನನ್ನು ಚಿತೆಯ ಮೇಲಿಟ್ಟರೆ ಸರಿಹೋಗುತ್ತದಷ್ಟೇ ?" ಎಂದನು.

ಆ ಕೂಡಲೇ ಭಿಕ್ಷುಕನು ಎದ್ದು ಕುಳಿತು "ಅವುಗಳನ್ನೆಲ್ಲ ಬೆಂಕಿಯಲ್ಲಿ ಹಾಕಿಬಿಟ್ಟರೆ, ನನ್ನನ್ನು ಬೆಂಕಿಗೆ ಹಾಕುವ ಅಗತ್ಯವೇ ಇಲ್ಲ" ಎಂದು

ಹೇಳಿ ಬೀದಿಯ ಕಡೆಗೆ ಓಡಿಯೇ ಹೋದನು. ಏನು ನಡೆಯುತ್ತಿರುವುದನ್ನು ಅರ್ಥಮಾಡಿಕೊಳ್ಳ ಲಿಕ್ಕೆ ಪುರೋಹಿತನಿಗೆ ಸ್ವಲ್ಪ ಹೊತ್ತೇ ಬೇಕಾಯಿತು. ಮನೆಗೆ ಕರೆದು ಊಟ ಹಾಕುವ ಗೃಹಿಣಿಯನ್ನು ಬೈಯಲಾಗದೆ, ಅವಳು ಹಾಕಿದ ಊಟವನ್ನು ತಿನ್ನ ಲಾಗದೆ ಭಿಕ್ಷುಕನು ಸತ್ತ ಹಾಗೆ ಬಿದ್ದು, ಬೆಂಕಿಯ ಮಾತು ಕೇಳಿದ ಕೂಡಲೇ ಬೇಗ ಎದ್ದು ಓಡಿಹೋಗಿ ಬಿಟ್ಟನು. ಪಾಪ! ಪುರೋಹಿತನಿಗೂ ಸೀತಾ ರಾಮಯ್ಯನಿಗೂ ಭಾರಿ ನಗೆ ಬಂದಿತು, ರಾಜಮ್ಮ ನಿಗೆ ಮುಖ ಎತ್ತಲಾಗದಂತೆ ಅವಮಾನವಾಯಿತು. ಅವಳು ಕೋಪದಿಂದ "ನಾನೇನು ನನಗಾಗಿಯೇ ಮಿತವ್ಯಯ ಮಾಡುವುದೇನು? ನಾನು ಯಾವುದೂ ಹಾಳಾಗಬಾರದೆಂದು ಸಾಧ್ಯವಾದಷ್ಟು ಉಳಿತಾಯ ಮಾಡಿದರೆ ಮನೆಗೇ ಹಣ ಉಳಿಯುವುದಷ್ಟೇ? ಬೆಳಗ್ಗೆ ನಾನು ಇವುಗಳನ್ನೇ ಹೊಟ್ಟೆ ತುಂಬ ತಿಂದೆ. ನನಗೇನೂ ಕೇಡು ಬರಲಿಲ್ಲ, ನಿಮಗೆಲ್ಲ ಇದೊಂದು ಆಟವಾಗಿದೆ. ಹೋಗಲಿ ಹಾಳಾಗಿ. ಈಗಲೇ ಎಲ್ಲ ವನ್ನೂ ಬೆಂಕಿಗೆ ಹಾಕುತ್ತೇನೆ" ಎಂದು ಗಂಡನನ್ನು ಕೋಪದಿಂದ ನೋಡಿ, ಎಲ್ಲ ಪದಾರ್ಥಗಳನ್ನೂ ಒಯ್ದು ಬಚ್ಚಲೊಲೆಗೆ ಹಾಕಿದಳು.

"ಅಬ್ಬ! ಈಗ ನನ್ನ ಹೊಟ್ಟೆನೋವು ಮಾಯ ವಾಯಿತು. ಹಸಿವೆ ತಾಳಲಾಗದಷ್ಟು ಎದ್ದಿದೆ, ಬೇಗ ಅಡಿಗೆ ಮಾಡಿಬಿಡು" ಎಂದನು ಸೀತಾರಾಮಯ್ಯ. "ಅಂದರೆ ನಿಮ್ಮ ರೋಗ ಕೂಡ ಕಳ್ಳರೋಗಾ ಅನ್ನಿ!" ಎಂದು ರಾಜಮ್ಮ ಮೋರೆ ತಿವಿದಳು. ಗಂಡ ಹೆಂಡಿರ ತಕರಾರಿನ ನಡುವೆ ತನಗೇನು ಕೆಲಸ ವೆಂದುಕೊಂಡು ಪುರೋಹಿತನು ಅಲ್ಲಿಂದ ಜಾರಿ ಕೊಂಡನು.

ಆಗ ವೈದ್ಯನು ಅವಸರದಿಂದ ಬಂದು, "ಸೀತಾ ರಾಮಯ್ಯ, ಔಷಧ ಕಳಿಸಲು ನನ್ನ ಆಳು ಎಲ್ಲೋ ಹೋದ. ನಾನೇ ತಂದಿದ್ದೇನೆ. ತೆಗೆದುಕೊಳ್ಳಿ" ಎಂದನು.

"ಬೇಕಾಗಿಲ್ಲ ವೈದ್ಯರೇ! ಇವರದು ಸುಳ್ಳು ರೋಗ!" ಎಂದು ರಾಜಮ್ಮ ಹೇಳಲು ಸೀತಾ ರಾಮಯ್ಯ ವೈದ್ಯನೊಂದಿಗೆ ನಡೆದ ಸಂಗತಿಯನ್ನು ಹೇಳಿದನು.

"ಹಾಗೇನು ಕತೆ? ಹಾಗಾದರೆ ನನ್ನದೂ ಕಳ್ಳ ಉಪವಾಸ ಅಂದುಕೊಳ್ಳಿ. ಇವತ್ತು ನನಗೂ ನಿಮ್ಮಲ್ಲೇ ಊಟ" ಎಂದನು ವೈದ್ಯ.

"ನೀವೆಲ್ಲ ಒಂದೇ!" ಎಂದು ರಾಜಮ್ಮ ಅಡಿಗೆ ಮನೆಗೆ ಹೋದಳು.

ಅಂದಿನಿಂದ ಅವಳು ಅಡಿಗೆ ಪದಾರ್ಥಗಳೇನಾದರೂ ಉಳಿದರೆ, ಆಗಿಂದಾಗಲೇ ಯಾರಿಗಾದರೂ ಕೊಡುವು ದನ್ನು ಅಭ್ಯಾಸ ಮಾಡಿಕೊಂಡಳು.



# ಗೊಡ್ಡು ಪ್ರಶ್ನೆ

ಒಬ್ಬ ರಾಜನು ತನ್ನ ಆಸ್ಥಾನದ ಸಭಿಕರೊಂದಿಗೆ ಹೊತ್ತು ಹೋಗದೆ ಏನೇನೋ ಪ್ರಶ್ನೆಗಳನ್ನು ಕೇಳುತ್ತಿದ್ದನು. ಅಂತಹ ಪ್ರಶ್ನೆಗಳಿಗೆ ಹಾಸ್ಯ ಜೋಡಣೆಯೊಂದಿಗೆ ಉತ್ತರ ಕೊಟ್ಟು ಸಭಿಕರನ್ನು ನಗಿಸುವವರಿಗೆ ಒಳ್ಳೆಯ ಬಹುಮಾನ ಕೊಡುತ್ತಿದ್ದನು. ಒಂದುಸಾರಿ ರಾಜನು. "ಅಂಗಡಿಯಲ್ಲಿ ಎಲ್ಲಾ ವಸ್ತುಗಳ ಹಾಗೆ ಬುದ್ಧಿ ಕೂಡಾ ಮಾರಲು ಸಿಗುವುದು ಪ್ರಾರಂಭವಾದರೆ, ಆಗ ಎಂತಹ ಪರಿಸ್ಥಿತಿ ಉಂಟಾಗುತ್ತದೆ?" ಎಂದು ಪ್ರಶ್ನಿಸಿದನು.

ಒಬ್ಬ ಸಭಿಕನು ಎದ್ದು, "ಮಹಾರಾಜಾ! ಬುದ್ಧಿ ಕೊಂಡುಕೊಳ್ಳಲು ಸಿಕ್ಕಿದರೆ ದೇಶದ ಮೂರ್ಖರೆಲ್ಲಾ ಮೇಲೆ ಬಿದ್ದು ಅದನ್ನು ಕೊಂಡುಕೊಳ್ಳುತ್ತಾರೆ. ಮತ್ತೆ ದೇಶದಲ್ಲಿ ಮೂರ್ಖರೇ ಇರಲಾರರು" ಎಂದನು.

ಈ ಉತ್ತರವು ರಾಜನಿಗೆ ಹಿಡಿಸಿತೇನೋ ಎಂಬ ಅನುಮಾನದಿಂದ ಆಸ್ಥಾನ ವಿದೂಷಕನು, "ಮಹಾರಾಜಾ. ಹಾಗೆ ನಡೆಯಲಿಕ್ಕೇ ಇಲ್ಲ. ಬುದ್ಧಿಯನ್ನು ಕೊಂಡು ಕೊಂಡು ಮೂರ್ಖರೆಲ್ಲಾ ಬುದ್ಧಿವಂತರಾಗಿ ಬಿಟ್ಟರೆ, ಬುದ್ಧಿ ಮಾರಲಿಕ್ಕೆ ಸಿಕ್ಕಿದರೂ ದೇಶಕ್ಕೆ ಮೂರ್ಖರ ಸಂಖ್ಯೆ ತಗ್ಗಲಾರದು" ಎಂದನು.

"ಅದು ಹೇಗೆಂದು ಹೇಳು" ಎಂದನು ರಾಜ.

"ಪ್ರತಿ ವ್ಯಾಪಾರಿಯೂ ಹೆಚ್ಚು ಲಾಭವನ್ನು ಆಶಿಸುತ್ತಾನೆ. ಬುದ್ಧಿಯನ್ನು ಕೊಂಡು ಕೊಂಡು ಮೂರ್ಖರೆಲ್ಲ ಬುದ್ಧಿವಂತರಾದರೆ, ಆಮೇಲೆ ಬುದ್ಧಿಯನ್ನು ಕೊಂಡುಕೊಳ್ಳುವವರೇ ಇರುವುದಿಲ್ಲ. ಆದುದರಿಂದ ವ್ಯಾಪಾರದವರು ಬುದ್ಧಿಯ ಹೆಸರು ಹೇಳಿ, ಮೂರ್ಖರಿಗೆ ಬೇರೆ ಯಾವುದನ್ನೋ ಮಾರುತ್ತಾರೆ. ಮೂರ್ಖರು ಮೂರ್ಖರಾಗಿಯೇ ಇರುತ್ತಾರೆ" ಎಂದನು ವಿದೂಷಕ.

"ಕೊಂಡುಕೊಳ್ಳುವವರು ತಾವು ತೆಗೆದುಕೊಳ್ಳುವುದು ಬುದ್ಧಿ ಹೌದೋ ಅಲ್ಲವೋ ಎಂಬುದನ್ನು ಹೇಗೆ ತಿಳಿದುಕೊಳ್ಳುತ್ತಾರೆ?" ಎಂದು ಸಭಿಕನೊಬ್ಬ ಕೇಳಿದ.

"ತಿಳಿದುಕೊಳ್ಳಲಾರರು. ಬುದ್ಧಿಯನ್ನು ಕೊಂಡುಕೊಳ್ಳಲು ಬರುವವರೆಲ್ಲಾ ಮೂರ್ಖರು ತಾನೆ?" ಎಂದನು ವಿದೂಷಕ.

ಈ ಮಾತಿಗೆ ಸಭಿಕರೆಲ್ಲ ನಕ್ಕರು. ರಾಜನು ವಿದೂಷಕನಿಗೆ ಒಳ್ಳೆಯ ಬಹುಮಾನ ಕೊಟ್ಟನು.






## ೧೫

[ಶಿವದತ್ತ, ಮಂದರದೇವ ಮೊದಲಾದವರು ತಾವು ಸೇರಿದ ದ್ವೀಪದಲ್ಲಿ ಒಬ್ಬ ವಿಚಿತ್ರವ್ಯಕ್ತಿಯನ್ನು ಸಂಧಿಸಿದರು. ಅವನು ಶಮನದ್ವೀಪದವನೆಂದೂ, ಸಮುದ್ರಕೇತು ಎಂಬ ಕಡಲ್ಗಳ್ಳನು ಹನ್ನೆರಡು ವರ್ಷಗಳ ಹಿಂದೆ ಅವನನ್ನು ಅಲ್ಲಿ ಬಿಟ್ಟುಹೋದನೆಂದೂ ತಿಳಿಯಿತು. ಅವರೆಲ್ಲರೂ ಒಂದಾಗಿ ಆಹಾರ ಸೇವಿಸಲು ತೊಡಗುವಷ್ಟರಲ್ಲಿ, ಸಮುದ್ರದಲ್ಲಿ ಏನೇನೋ ವಿಕೃತ ಶಬ್ದಗಳು ಕೇಳತೊಡಗಿದುವು.]

ಆ ಕೂಡಲೆ ಶಿವದತ್ತನೂ, ಮಂದರದೇವನೂ ಹೊಟ್ಟೆಯ ಚಿಂತೆಯನ್ನು ಬಿಟ್ಟು ಸರ್ರನೆ ತಮ್ಮ ಕತ್ತಿಯನ್ನೆಳೆದುಕೊಂಡು ಹಾರಿ ನಿಂತರು. ಪೊದರುಗಳ ಮರೆಯಲ್ಲಿ ಬಗ್ಗಿಕೊಂಡು, ಕುಪ್ಪಳಿಸಿಕೊಂಡು ಸಮೀಪದಲ್ಲಿರುವ ಸಮುದ್ರತೀರದ ಕಡೆಗೆ ಹೋಗತೊಡಗಿದರು.

ಅವರ ಅನುಚರರಲ್ಲಿ ಇಬ್ಬರು ಮಾತ್ರವೇ ಅವರ ಹಿಂದೆಯೇ ಹೋಗದೆ ಭೋಜನ ಪದಾರ್ಥಗಳನ್ನು ನೋಡಿಕೊಳ್ಳುವುದರಲ್ಲಿ ಮಗ್ನರಾಗಿದ್ದರು. ವಜ್ರಮುಷ್ಟಿ ಪೊದೆಯಿಂದ ಪೊದೆಗೆ ಹಾರುತ್ತ, ಮೃಗದ ಹಾಗೆ ಬಗ್ಗಿಕೊಂಡೇ ಎಲ್ಲರಿಗಿಂತ ಮೊದಲು ಸಮುದ್ರತೀರವನ್ನು ಸೇರಿ, ಹಿಂದೆ ಬರುವವರಿಗೆ, ಜಾಗ್ರತೆ ಎಂಬುದರ ಸೂಚನೆಯಾಗಿ ಕೈಯಾಡಿಸಿದನು. ಸಮುದ್ರದಲ್ಲಿರುವವರಿಗೆ, ತಾವಾರೂ ಕಾಣಬಾರದೆಂದು ಅವನು ಸೂಚಿಸುವುದರಿಂದ, ಸಮುದ್ರದಲ್ಲಿರುವವರು ಯಾರೆಂಬುದು ಅವನಿಗೆ ಗೊತ್ತಾಗಿರಬೇಕೆಂದಾಯಿತು. ಆದರಿಂದ ಅವರಿಗೆ ಸ್ವಲ್ಪ ಸಮಾಧಾನವೂ ಆಯಿತು.

ಅಂತಲೇ ಶಿವದತ್ತಾದಿಗಳು ಮರಗಿಡಗಳ ಹಿಂದೆಯೇ ನಿಂತು ಸಮುದ್ರದ ಕಡೆಗೆ ಹಣಿಕಿ ನೋಡುತ್ತಿದ್ದರು. ತೀರದಿಂದ ಸುಮಾರು ಸಾವಿರ




ಗಜಗಳ ದೂರ ಸಮುದ್ರದಲ್ಲಿ ಚಿಕ್ಕದೊಂದು ನೌಕಾಯುದ್ಧವೇ ನಡೆಯುತ್ತಿದ್ದಿತು. ಆ ಯುದ್ಧದಲ್ಲಿ ಒಟ್ಟು ಆರು ಹಡಗುಗಳು ಭಾಗವಹಿಸಿದ್ದುವು. ಮೊದಲೇ ಅಲ್ಲಕಲ್ಲೋಲವಾಗಿದ್ದ ಸಮುದ್ರದಲ್ಲಿ ಅವು ಒಂದನ್ನೊಂದು ತಾಕಲಾಡಿಕೊಂಡಿದ್ದುವು. ಆಯುಧಗಳನ್ನು ಧರಿಸಿದ ಅನೇಕ ಮಂದಿ ಯೋಧರು ಒಂದು ಹಡಗಿನಿಂದ ಇನ್ನೊಂದು ಹಡಗಿಗೆ ಧುಮುಕುತ್ತ, ತಳತಳ ಹೊಳೆಯುವ ಕತ್ತಿಗಳಿಂದ ಇದಿರಾಳಿಗಳನ್ನು ತರಿಯುತ್ತ ಭಾರಿ ಅಂತಕನ ಕೋಲಾಹಲ ನಡೆಸಿಕೊಂಡಿದ್ದರು. ಜಲ ಯುದ್ಧದಲ್ಲಿ ಮಹಾಪರಿಣತರಾಗಿ ಕಾಣುತ್ತಿದ್ದರು. ಚಿಕ್ಕದಲ್ಲ, ದೊಡ್ಡ ಯುದ್ಧವೇ.

ಇದ್ದಕ್ಕಿದ್ದಹಾಗೆ ಒಂದು ಹಡಗಿನಲ್ಲಿದ್ದ ಕರ್ರಗೆ ವಿಕೃತಾಕಾರದವನಾದ ಧಾಂಡಿಗನೊಬ್ಬನು, ಬಾಯಿಯಲ್ಲಿ ಕತ್ತಿಯನ್ನು ಕಚ್ಚಿಕೊಂಡು, ಹಡಗಿನ ತೆರೆಚಾಪೆಯ ಮರಗಂಬದ ಮೇಲೆ ಅರ್ಧದವರೆಗೆ ಹತ್ತಿ, ಅಲ್ಲಿಂದ ಕತ್ತಿಯನ್ನು ಬಲಗೈಯಲ್ಲಿ ಝಳಪಿಸುತ್ತ "ಜೈ ಕಾಲಕೇತಾ!" ಎಂದು ಬೊಬ್ಬಿರಿದು ಆಕಾಶಕ್ಕೆ ನೆಗೆದು ಮತ್ತೊಂದು ಹಡಗಿನ ಮೇಲೆ ಧುಮ್ಮನೆ ಬಿದ್ದನು.

ಆ ಕ್ಷಣದಿಂದ ಹೋರಾಟವು ಇನ್ನಷ್ಟು ಭೀಕರಾಕಾರಕ್ಕೆ ಮಾರ್ಪಟ್ಟಿತು. ಎರಡು ಪಕ್ಷಗಳ ಯೋಧರಲ್ಲಿ ಕೆಲವರ ಕೈಗಳೂ, ತಲೆಗಳೂ ಹಾರತೊಡಗಿದುವು. ಸಾಯುವ ಕೂಗುಗಳೊಂದಿಗೆ ಕೆಲವರು ಸಮುದ್ರದಲ್ಲಿ ಬೀಳುತ್ತಿದ್ದರು. ಶಿರಸ್ತ್ರಾಣದಲ್ಲಿ ಒಂಟಿ ಕೊಂಬಿನೊಂದಿಗೆ ಭೀಕರವಾಗಿ ಅರಚುತ್ತ ಹತ್ಯಾಕಾಂಡ ನಡೆಸುವ ಆ ಕರ್ರಗಿನ ಧಾಂಡಿಗನು, ಒಂದು ಹಡಗಿನಿಂದ ಇನ್ನೊಂದು ಹಡಗಿಗೆ ಲೀಲಾಜಾಲವಾಗಿ ಹಾರಾಡಿಕೊಂಡಿದ್ದನು. ಅವನ ಕೈಚಳಕ ಮೈಚಳಕಗಳಿಗೆ ಅವನಿಗೆ ಅವನೇ ಸಾಟಿಯಂತೆ ಕಂಡನು.

"ಓಹ್! ಎಷ್ಟು ವರ್ಷಗಳ ಮೇಲೆ ಕಂಡೆ! ನೋಡಿದಿರಾ! ಅವನೇ ಸಮುದ್ರಕೇತು! ಕ್ರೂರಾತಿ ಕ್ರೂರನಾದ ಸಮುದ್ರಚೋರ! ನನ್ನ ಕಡು ವೈರಿ! ಈ ದಿನ ನನ್ನ ಕಣ್ಣಿಗೆ ಬಿದ್ದಿದ್ದಾನೆ. ಇನ್ನೆಂದಿಗೂ ಹಿಂದಿರುಗಿ ಹೋಗಲು ಬಿಡಲಾರೆ!" ಎಂದನು ವಜ್ರಮುಷ್ಟಿ ಶಿವದತ್ತನೊಂದಿಗೆ.

ಅದನ್ನು ಕೇಳಿ ಶಿವದತ್ತನೂ ಮಂದರದೇವನೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಆ ವಿಕೃತಾಕಾರದ ರಾಕ್ಷಸ ಸ್ವರೂಪನು ಸಮುದ್ರಕೇತನೆಂದು ತಿಳಿದ ಕೂಡಲೇ, ಈಗ ನಡೆಯುವ ಯುದ್ಧವು ಸಮುದ್ರಚೋರರ ಗುಂಪಿಗೂ, ಯಾರೋ ಸಮುದ್ರ ವರ್ತಕರ ಹಡಗಿಗೂ ನಡೆಯುವ ಯುದ್ಧವೆಂದು ಶಿವದತ್ತನು ಊಹಿಸಿಕೊಂಡನು. ಆ ನಿರ್ಭಾಗ್ಯ ವರ್ತಕನು ಯಾವ ದೇಶದವನೋ, ಅವನನ್ನು ಇದಿರುನೋಡಿಕೊಂಡು ಯಾರೆಲ್ಲ ಇರುವರೋ, ಪಾಪ ಅನಿಸಿತು ಶಿವದತ್ತನಿಗೆ. ಈಗ ಏನು ಮಾಡುವುದೆಂದು ಅವನು ಆಲೋಚಿಸಿಕೊಂಡಿರುವಾಗ, ಚಿಕ್ಕ

ದೊಂದು ಬಟ್ಟದೋಣಿ ಉಳಿದ ಹಡಗುಗಳನ್ನು ಬಿಟ್ಟು ನೇರಾಗಿ ತೀರದ ಕಡೆಗೆ ತಿರುಗಿ ತಿರುಗಿ ಗಂಡಚಕ್ರ ದೊಳಗಿನಿಂದ ಪಾರಾಗಿ ಬರತೊಡಗಿತು.

ಶಿವದತ್ತನೂ ಮಂದರದೇವನೂ ಅದನ್ನು ನೋಡಿ ಆಶ್ಚರ್ಯಚಕಿತರಾದರು. ಆ ಚಿಕ್ಕ ಬಟ್ಟತರಿ ತೀರದ ಕಡೆಗೆ ಓಡುವುದನ್ನು ಹಡಗಿನಲ್ಲಿ ಹೋರಾಡುವವರಾರೂ ಗಮನಿಸಿದಂತೆ ಕಾಣಲಿಲ್ಲ. ಅವರು ತಮ್ಮೊಳಗೆ ಕೂಗುತ್ತ ಚೀರುತ್ತ ಹಡಗಿನಿಂದ ಹಡಗಿಗೆ ಹಾರುತ್ತ ಒಬ್ಬರನ್ನೊಬ್ಬರು ಕೊಲ್ಲುವುದರಲ್ಲೇ ಕಣ್ಣಾಗಿದ್ದರು. ತಪ್ಪಿಸಿಕೊಂಡು ಹೋಗುವವರು ಅದೃಷ್ಟಶಾಲಿಗಳಂತೆ ಕಾಣುತ್ತಿದ್ದರು.

ಸ್ವಲ್ಪಹೊತ್ತು ಕಳೆಯುವಷ್ಟರಲ್ಲಿ ಸಮುದ್ರಕೇತು ಓಡಿಹೋಗುವ ತರಿಯನ್ನು ಗಮನಿಸಿ, "ಓ ಹೋಯ್ !" ಎಂದು ಗಟ್ಟಿಯಾಗಿ ಕೂಗಿ, "ಅದೋ ! ಅವರು ಓಡಿ ಹೋಗುತ್ತಿದ್ದಾರೆ. ಈಜುತ್ತಾ, ಓಡಿಹೋಗಿ ಆ ಬಟ್ಟ ದೋಣಿಯನ್ನು ಹಿಡೀರಿ, ಹಿಡೀರಿ ! ನಮ್ಮ ಮುಖ್ಯ ಗುರಿ ಅದರಲ್ಲೇ ಇದೆ !" ಎಂದು ಕೂಗಿದನು.

ಕೂಡಲೇ ಕಡಲು ಗಳ್ಳರ ಗುಂಪಿನ ಕೆಲವರು ಸಮುದ್ರಕ್ಕೆ ಹಾರಿ, ಗುಂಡಗಿನ ತರಿಯ ಕಡೆಗೆ ವೇಗವಾಗಿ ಸಾಗತೊಡಗಿದರು. ಅವರ ಹಿಂದೆ ಮತ್ತೆ ಕೆಲವರು ಹಾರಿ, ಈಜಿಕೊಂಡು ಹೋಗುವ ಕಳ್ಳರನ್ನು ತಮ್ಮ ಕತ್ತಿಯಿಂದ ಹೊಡೆಯುತ್ತ ತಡೆಯತೊಡಗಿದರು. ಆದುದರಿಂದ ಬಟ್ಟತರಿ ನಿರಾತಂಕವಾಗಿ ತೀರದ ಕಡೆಗೆ ಬರುತ್ತಲೇ ಇದ್ದಿತು.

ಅದನ್ನು ಅಟ್ಟಿಸಿಕೊಂಡು ಈಜುಬಿದ್ದ ಪಕ್ಷ ಪ್ರತಿಪಕ್ಷಗಳೊಳಗೆ ಸಮುದ್ರ ಜಲದಲ್ಲೇ ಹೋರಾಟ ನಡೆಯ ತೊಡಗಿದರು.

"ಅರರೆ ! ಎಂತಹ ವಿಚಿತ್ರ ಯುದ್ಧವನ್ನು ನಾವು ನೋಡುತ್ತಿದ್ದೇವೆ ! ನೀರಿನಲ್ಲಿಯೇ ತೇಲಾಡಿಸುವ ಸೋಲುಗೆಲುವುಗಳ ಯುದ್ಧವನ್ನು ನಾನಂತೂ ಈವರೆಗೂ ನೋಡಿಲ್ಲ ! ಇವರಿಗೆ ನೆಲವೂ ಜಲವೂ ಒಂದೇಯಾಗಿದೆ! ಎಂತಹ ಅದ್ಭುತ ಯುದ್ಧವಿದು!" ಎಂದನು ಮಂದರದೇವ.




ಶಿವದತ್ತನು ನಿಜವೆಂಬಂತೆ ತಲೆಯಾಡಿಸಿದನು. ಅವನು ಹೋರಾಡಿಕೊಂಡಿರುವ ಹಡಗುಗಳ ಕಡೆಗೂ, ತೀರವನ್ನು ಸಮೀಪಿಸುತ್ತಿರುವ ಬಟ್ಟ ತರಿಯ ಕಡೆಗೂ ನೋಡಿಕೊಂಡಿದ್ದನು. ಅವೆರಡರ ನಡುವೆ ಸಮುದ್ರ ಜಲದಲ್ಲಿ ಈಜುಗಾರರ ಭಯಂಕರ ಸಮರ! ನೋಡ ನೋಡುತ್ತಿದ್ದಂತೆ ಎರಡು ಪಕ್ಷದವರ ಸಂಖ್ಯೆ ಕಡಿಮೆಯಾಗುತ್ತಲೂ ಇದ್ದಿತು.

ಕ್ರಮವಾಗಿ ಗುಂಡಗಿನ ತರಿ ತೀರವನ್ನು ಸಮೀಪಿಸಿತು. ತೀರವು ಐದಾರು ಗಜ ದೂರದಲ್ಲಿರುವಾಗಲೇ ಅದರೊಳಗಿದ್ದ ಇಬ್ಬರು ಸ್ತ್ರೀಯರು ನೀರಿಗೆ ಹಾರಿ ಬಿದ್ದೆದ್ದು ಈಜಿ ಒದ್ದಾಡುತ್ತಾ ಅವಸರವಸರವಾಗಿ ಹೇಗೋ ತೀರವನ್ನು ತಲಪಿದರು. ಹಿಂದೆಯೇ ಸಮುದ್ರದಲ್ಲಿ ಸಮುದ್ರಕೇತನ ಭೀಕರ ಗರ್ಜನೆ !




ಆದರ ಹಿಂದೆ ಎರಡು ಹಡಗುಗಳು ತೀರದಕಡೆ ಭರದಿಂದ ಬರತೊಡಗಿದುವು. ಮುಳುಗಿ ಹೋಗುತ್ತಿರುವ ಎರಡು ದೊಡ್ಡ ಹಡಗುಗಳಿಂದ ಹೃದಯ ವಿದಾರಕವಾದ ಆರ್ತನಾದ ಬೇರೆ! ಆದರ ಕಡೆಗೆ ಯಾರ ಲಕ್ಷ್ಯವೂ ಇಲ್ಲ!

"ಮಂದರದೇವ ಪ್ರಭೂ! ಇನ್ನು ನಾವು ಹೊರ ಬೀಳಲೇಬೇಕು." ಎಂದನು ಶಿವದತ್ತ. "ಅಲ್ಲಿ ತಪ್ಪಿಸಿಕೊಂಡು ಓಡಿಹೋಗುತ್ತಿರುವ ಸ್ತ್ರೀಯರು ಯಾರು ಏನೆಂಬ ವಿಚಾರ ಅಪ್ರಸ್ತುತ. ನಾವೀಗ ಆ ಸಮುದ್ರಕೇತನನ್ನು ತಡೆಯದೆ ಹೋದರೆ, ಅವರಿಬ್ಬರೂ ಅವನ ಕೈಗೆ ಸಿಕ್ಕಿ ಬೀಳುವುದು ಖಂಡಿತ. ಅವನು ತೀರಕ್ಕೂ ಓಡಿ ಬಂದು ಆ ಸ್ತ್ರೀಯರನ್ನು ಎಳೆದೊಯ್ಯುವ ಹಾಗೇ ಇದೆ" ಎಂದನು ಪುನಃ ಶಿವದತ್ತ.

ಮಂದರದೇವನು ಹಿಂದಿರುಗಿ ನೋಡಿದನು. ಅವನಿಗೆ ಮೂವರು ಸೈನಿಕರೂ, ವಜ್ರಮುಷ್ಟಿಯೂ ಕಾಣಿಸಿದರು. "ಉಳಿದಿಬ್ಬರು ನಮ್ಮವರು ಕಾಣುವುದಿಲ್ಲವೇಕೆ ? ಎಲ್ಲಿಗೆ ಹೋದರು ?" ಎಂದು ಒಬ್ಬ ಸೈನಿಕನನ್ನು ಕೇಳಿದನು ಮಂದರದೇವ.

"ಅಯ್ಯಾ, ಅವರಿಬ್ಬರೂ ನಮ್ಮ ಭೋಜನ ಪದಾರ್ಥಗಳನ್ನು ನೋಡಿಕೊಳ್ಳುತ್ತ ಅಲ್ಲೇ ಇದ್ದಾರೆ" ಎಂದನು ಆ ಸೈನಿಕ.

"ಓಡಿಹೋಗಿ ಅವರನ್ನೂ ಕರೆದುಕೊಂಡು ಬಾ !" ಎಂದು ಮಂದರದೇವನು ಆ ಸೈನಿಕನಿಗೆ ಆಜ್ಞೆ ಮಾಡಿದನು.

ಸೈನಿಕನು ಹೊರಡಲುಜ್ಜುಗಿಸಿದಾಗ ಶಿವದತ್ತನು ಅವನನ್ನು ತಡೆದು, "ಅಯ್ಯಾ, ಮಂದರದೇವ ಪ್ರಭೂ, ನಾವೆಲ್ಲಾ ಕೂಡಿದರೂ ಎಂಟು ಮಂದಿಗಿಂತ ಹೆಚ್ಚಾಗಲಾರೆವು. ಸಮುದ್ರಕೇತನ ಗುಂಪಿನಲ್ಲಿ ಐವತ್ತು ಅರುವತ್ತಕ್ಕಿಂತಲೂ ಹೆಚ್ಚೇ ಹುಚ್ಚು ಹಿಡಿದಂತಹ ವೀರರಿದ್ದಾರೆ. ನಾವು ಅವರನ್ನು ಇದಿರಿದಿರಾಗಿ ಕೆಣಕುವುದು ವಿಪರೀತಕ್ಕೇ ಒಯ್ಯುತ್ತದೆ. ಆದಕ್ಕೆ ಒಂದು ಉಪಾಯ ಮಾಡುವುದು ಒಳ್ಳೆಯದು" ಎಂದನು ಶಿವದತ್ತ.

ಮಂದರದೇವನು ಕಣ್ಣು ಸಂಜ್ಞೆಯಿಂದ ಅದೇನೆಂದು ಕೇಳಿದನು.

"ನಾವು ಇಷ್ಟು ಕಡಿಮೆ ಸಂಖ್ಯೆಯಲ್ಲಿರುವವರೆಂಬುದು ಸಮುದ್ರಕೇತನಿಗೆ ತಿಳಿಯಲೇ ಬಾರದು. ಅದು ತಿಳಿದುಬಿಟ್ಟರೆ ಬಹಳ ಅಪಾಯವಿದೆ. ನಾವು ಐವರು ಮರಗಳ ಮರೆಯಲ್ಲಿದ್ದು. ಒಂದೇ ಬಾಯಿಗೆ ಸಾವಿರಾರು ಕಂಠಗಳು ಹೊರಡುವಂತೆ, ಬೇರೆ ಬೇರೆ ಸ್ವರಗಳಿಂದ ಕೂಗಿಕೊಂಡು ಅವರ ಮೇಲೆ ಧುಮುಕಬೇಕು. ಉಳಿದ ನಮ್ಮ ಮೂವರು, ಹಾಗೆಯೇ ಕೂಗಿಕೊಂಡು ಕಳ್ಳರ ಹಿಂದಿನ ಬದಿಯಲ್ಲಿ ಅರಚಬೇಕು. ಹಿಂದೆ ಇರುವ ಮೂವರೂ ನಮ್ಮ ಹಾಗೇ ಕಿರುಚಿ ಅವರ ಮೇಲೆ ಬೀಳಬೇಕು" ಎಂದನು ಶಿವದತ್ತ. ಈ ಉಪಾಯಕ್ಕೆ ಮಂದರದೇವನು ಒಪ್ಪಿದನು.




ಊಟದ ಪದಾರ್ಥ ನೋಡಿಕೊಳ್ಳುತ್ತಿದ್ದವರಿಗೂ ಈ ಸಂಗತಿಯನ್ನು ಹೇಳಿ, ಅವರೊಂದಿಗೆ ಕಳ್ಳರ ಗುಂಪಿನ ಹಿಂದಿನ ಬದಿಯಲ್ಲಿ ಬಂದು ಬೀಳ ಬೇಕೆಂದು ಆ ಸೈನಿಕರಿಗೆ ಆಜ್ಞಾಪಿಸಲಾಯಿತು. ಈ ಉಪಾಯದಂತೆ ಅವರೆಲ್ಲ ತಕ್ಕ ಜಾಗದಲ್ಲಿ ಅಡಗಿ ಕುಳಿತು ಹೊಂಚ ತೊಡಗಿದರು.

ಕ್ರಮವಾಗಿ ಸಮುದ್ರಕೇತನ ಹಡಗುಗಳೆರಡೂ ತೀರದ ಹತ್ತಿರ ಬಂದುವು. ಸಮುದ್ರದಲ್ಲಿ ನಡೆಯುತ್ತಿದ್ದ ಹೋರಾಟವು ಸಪ್ಪಗಾಯಿತು. ಎರಡು ಹಡಗುಗಳು ಮುಳುಗಿಹೋದುದರಿಂದ, ಉಳಿದ ಎರಡು ಹಡಗುಗಳನ್ನೂ ಸಮುದ್ರಕೇತನ ಕಡೆಯವರು ವಶಪಡಿಸಿಕೊಂಡು, ಅವರೂ ತೀರದ ಕಡೆಗೆ ಹೊರಟರು.

ಅವರಿಗೆ ದಾರಿಯಲ್ಲಿ ನೀರಿನ ಮೇಲೆ ಹೋರಾಡುವವರು ಕಾಣುತ್ತಲೇ, ತಮ್ಮ ಕಡೆಯವರನ್ನು ಹಡಗಿನೊಳಗೆ ಎಳೆಯುತ್ತ, ಶತ್ರುಗಳೆನಿಸಿದವರನ್ನು ಕತ್ತಿಯಿಂದ ಕಡಿದು ಚೆಲ್ಲುತ್ತಾ ಅವರು ಬರುತ್ತಿದ್ದರು.

ಶಿವದತ್ತನು ಆ ಭಯಂಕರ ದೃಶ್ಯಗಳನ್ನೆಲ್ಲ ಒಂದುಸಾರಿ ನೋಡಿ, "ಮಂದರದೇವ ಪ್ರಭೂ! ಆ ಸಮುದ್ರಚೋರರು ಇದಿರಾಳಿಗಳೆಲ್ಲರನ್ನೂ ನಿರ್ದಯದಿಂದ ಕೊಲ್ಲುತ್ತಿದ್ದಾರೆ. ಇನ್ನು ಆ ಸ್ತ್ರೀಯರ ರಕ್ಷಣೆಯ ಭಾರವನ್ನು ನಾವು ನೋಡಿಕೊಳ್ಳ ಬೇಕಾದ್ದೇ ಸರಿ. ಅವರು ಓಡಿದ ದಿಕ್ಕಿಗೆ ಇವರಾರೂ ಹೋಗದಂತೆ ತಡೆಯುವುದು ಬಹು ಮುಖ್ಯ" ಎಂದನು. ಮಂದರದೇವನು ಆ ಭಯಂಕರ ದೃಶ್ಯವನ್ನು ಒಂದುಸಾರಿ ನೋಡಿ ತಲೆಯಾಡಿಸಿ: "ಸರಿ. ನಾವು ನಮ್ಮ ಕೆಲಸ ನೋಡುವ!" ಎಂದು ಪಕ್ಕದಲ್ಲಿರುವ ವಜ್ರಮುಷ್ಟಿಯನ್ನು ನೋಡಿ, "ಅರರೆ! ವಜ್ರ ಮುಷ್ಟಿ ನಿರಾಯುಧನಾಗಿದ್ದಾನೆ. ಅವನಿಗೊಂದು ಕತ್ತಿ ಕೊಡಬೇಕಲ್ಲ! ಏನು ಮಾಡೋಣ" ಎಂದು ಅತ್ತಿತ್ತ ನೋಡಿದನು.

ಅದನ್ನು ನೋಡಿ ವಜ್ರಮುಷ್ಟಿ ನಕ್ಕು, "ಅಯ್ಯಾ, ಆ ಚಿಂತೆ ಬಿಡಿ. ನನಗೆ ಬೇಕಾದ ಕತ್ತಿಯನ್ನು ನಾನೇ ಸಂಪಾದಿಸುತ್ತೇನೆ. ಆ ಸಮುದ್ರಕೇತನನ್ನು ನನ್ನ ಕೈಯಿಂದಲೇ ಕೊಲ್ಲಬೇಕೆಂದು ಬಹು ದಿನಗಳ ಆಶೆ. ಈದಿನ ಕಣ್ಣಿಗೆ ಬಿದ್ದಿದ್ದಾನೆ. ಕತ್ತಿ ಸಿಗುವ ವರೆಗೆ ನನ್ನ ಮುಷ್ಟಿಗಳೂ ಉಗುರುಗಳೂ ಸಾಕು" ಎಂದನು.

ಎಲ್ಲರೂ ಅಲ್ಲಿಂದ ಹೊರಟರು. ವಜ್ರಮುಷ್ಟಿಗೆ ಆ ಪ್ರಾಂತವೆಲ್ಲಾ ಚೆನ್ನಾಗಿ ಗೊತ್ತಿತ್ತು. ಆದುದರಿಂದ ಅವನೇ ಮುಂದೆ ಹೋಗುತ್ತಿದ್ದನು. ತೀರವನ್ನು ಸೇರಿದ ಸ್ತ್ರೀಯರಿಬ್ಬರೂ ಒಂದುಸಾರಿ ಸಮುದ್ರದ ಕಡೆಗೆ ಹಿಂದಿರುಗಿ ಇನ್ನೂ ತಮ್ಮ ಬೆನ್ನು ಹಿಡಿದ ಸಮುದ್ರಕೇತನನ್ನು ನೋಡಿ ಭಯಕಂಪಿತರಾಗಿ, ಮರಗಳ ಗುಂಪಿನ ಕಡೆಗೆ ಬೇಗಬೇಗನೆ ಓಡಿದರು.

ಅಷ್ಟರಲ್ಲಿ ಸಮುದ್ರಕೇತನ ಹಡಗುಗಳೆರಡೂ ತೀರದಲ್ಲಿ ಲಂಗರು ಹಾಕುವುದೂ, ಸಮುದ್ರಕೇತನು

ಕತ್ತಿಯನ್ನು ಝಳಪಿಸಿಕೊಂಡು "ಜೈ ಕಾಲಕೇಯಾ" ಎಂದು ಕೂಗಿ ನೀರಿಗೆ ಹಾರಿ, ಹಿಂದಿರುಗಿ ತನ್ನ ಅನುಚರರನ್ನು ನೋಡಿ, "ಸ್ವಯಂಪ್ರಭೆಗೆ ಮಾತ್ರ ಒಂದು ಕೂದಲೂ ಕೊಂಕಬಾರದು. ಆ ಮುದುಕಿಯನ್ನು ಮಾತ್ರ ಕತ್ತಿಗೆ ಬಲಿಕೊಟ್ಟು ಬಿಡಿ! ಅವರು ಯಾವ ಕಡೆಗೆ ಓಡಿದರೆಂದು ಗಮನಿಸಿದಿರಷ್ಟೆ?" ಎಂದು ಕೂಗಿ ಆಜ್ಞೆಮಾಡಿದನು.

ಅವರೆಲ್ಲ ಇನ್ನೂ ನೀರಿನಲ್ಲೇ ತೀರದ ಕಡೆಗೆ ಬರುತ್ತಿದ್ದುದರಿಂದ, ಸಮುದ್ರಕೇತನ ಮಾತಿಗೆ "ಹೋಹೋ" ಎಂದು ಕೂಗಿ ನೋಡಿದ್ದೇವೆಂಬಂತೆ ಸೂಚಿಸಿದರು. ಎಲ್ಲರೂ ಬಹಳ ಶ್ರಮಿಸಿ ತೇಕುತ್ತಿದ್ದರು.

ಹಾಗೆ ಈಜಿಯೂ ನಡೆದೂ ಬಂದು ಸಮುದ್ರಕೇತು ತೀರ ಸೇರಿದನು. ಅವನ ಹಿಂದೆ ಇಪ್ಪತ್ತು ಮಂದಿ ಕಡಲ್ಗಳ್ಳರೂ ತೀರವನ್ನು ತಲಪಿದರು. ಎಲ್ಲರೂ ಆ ಸ್ತ್ರೀಯರು ಓಡಿಹೋದ ಮರಗಳ ಗುಂಪಿನ ಕಡೆಗೆ ಸದ್ದುಮಾಡದೆ ಓಡಿದರು.

"ತ್ವರೆಮಾಡಿ! ಅವರು ಮರಗಳ ಗುಂಪಿನೊಳಗೆ ಹೋಗುವುದಕ್ಕೆ ಮೊದಲೇ ನಾವು ತಡೆಯಬೇಕು. ಎಲ್ಲರೂ ಒಂದೇ ಬಾರಿಗೆ ಕೂಗಿ ಅವರ ಮೇಲೆ ಹಾರೋಣ. ವಿಜಯವೋ ವೀರಸ್ವರ್ಗವೋ!" ಎಂದನು ಶಿವದತ್ತ.

"ಮರಾಳದೇವಿಯ ಕರುಣೆ!" ಎಂದು ಮಂದರದೇವನು ಕತ್ತಿಯನ್ನು ಮೇಲೆತ್ತಿ ನಮಸ್ಕಾರ ಮಾಡಿದನು.

ಶಿವದತ್ತಾದಿಗಳೆಲ್ಲರೂ ಮರಗಳ ಗುಂಪಿನೊಳಗೆ ನುಸುಳಿ, ಬಿಚ್ಚುಗತ್ತಿಗಳೊಂದಿಗೆ ಅಲ್ಲೆಲ್ಲಾದರೂ ಆ ಸ್ತ್ರೀಯರಿದ್ದಾರೋ ಎಂದು ನೋಡಿದರು. ಅವರ ಸುಳಿವು ಕಾಣಲೇ ಇಲ್ಲ. "ಆ ಸ್ತ್ರೀಯರು ಇನ್ನೂ ಒಳಭಾಗಕ್ಕೆ ಹೋಗಿರಬಹುದು" ಎಂದನು ಮಂದರದೇವ.

ಶಿವದತ್ತನು ತಲೆಯಾಡಿಸಿ, "ಒಂದುಸಾರಿ ಆ ಸಮುದ್ರ ಕಳ್ಳರನ್ನು ಓಡಿಸಿಬಿಟ್ಟರೆ, ಆಮೇಲೆ ಆ ಸ್ತ್ರೀಯರನ್ನು ಹುಡುಕುವುದೇನೂ ಕಷ್ಟವಿಲ್ಲ.



ನಮ್ಮ ಲಕ್ಷ್ಯವೆಲ್ಲ ಕಳ್ಳರ ಮೇಲೆ ಇರಲಿ!" ಎಂದನು. ಆಗ ಸಮುದ್ರಕೇತು ತನ್ನ ಅನುಚರರೊಂದಿಗೆ ಮರಗಳ ಗುಂಪಿನ ಹತ್ತಿರ ಹತ್ತಿರ ಬಂದುಬಿಟ್ಟನು. ವಜ್ರಮುಷ್ಟಿ ಎತ್ತರವಾದೊಂದು ಮರದ ಮೇಲೆ ಹತ್ತಿ, ಕೆಳಗೆ ಬಾಗಿದ್ದ ಒಂದು ಕೊಂಬೆಯ ಮೇಲೆ ಹಾವಿನಹಾಗೆ ಮಲಗಿದನು.

ಸಮುದ್ರಕೇತು ಆ ಮರದ ಕೆಳಭಾಗಕ್ಕೆ ಬಂದದ್ದೇ ತಡ, ವಜ್ರಮುಷ್ಟಿ "ಜೈ ಕಾಲಕೇಯಾ" ಎಂದು ಕೂಗಿ ವಜ್ರಕೇತನ ಮುಂದೆ ಹಾರಿದನು.

ಅದೇ ಸಮಯದಲ್ಲಿ "ಜೈ ಮರಾಳೀ!" ಎನ್ನುತ್ತ ಶಿವದತ್ತ ಮಂದರದೇವಾದಿಗಳೂ ಒಮ್ಮೆಗೇ ಮರಗಳಾಚೆಯಿಂದ ಹೊರಬಿದ್ದು ಸಮುದ್ರಕೇತನ ಮೇಲೆ ಲಂಘಿಸಿದರು.

ಆ ಕ್ಷಣದಲ್ಲಿ ಈ ಹೊಸ ಆಕ್ರಮಣದಿಂದ ಬೆಕ್ಕಸ ಬೆರಗಾದ ಸಮುದ್ರಕೇತು, ಮರುಕ್ಷಣದಲ್ಲಿ ಭೀಕರವಾಗಿ ಗರ್ಜಿಸಿದನು. ಅಷ್ಟರೊಳಗೆ ವಜ್ರಮುಷ್ಟಿ ಕಡಲ್ಗಳ್ಳರಲ್ಲೊಬ್ಬನ ಕತ್ತಿಯನ್ನು ಎಳೆದುಕೊಂಡು, ಸಿಂಹದ ಹಾಗೆ ಇಬ್ಬರು ಮೂವರನ್ನು ಕಡಿದು ಚೆಲ್ಲಿದನು. ಕಳ್ಳರು ದಂಗಾಗಿ ಮರಗಟ್ಟಿಹೋದರು.

"ಹೆದರಬೇಡಿ! ಓಡಬೇಡಿ!" ಎಂದು ಸಮುದ್ರಕೇತನು ತನ್ನ ಅನುಚರರಿಗೆ ಧೈರ್ಯ ಹೇಳಿ ಕಾಲಕೇಯನ ಜಯಾಕಾರದೊಂದಿಗೆ ಶಿವದತ್ತನ ಮೇಲೆ ಕೈ ಚಳಕ ತೋರಿಸಿದನು. ಈ ಹೊಸ ಗಂಡಾಂತರಕ್ಕೆ ಹೆದರಿದ ಅವನ ಅನುಚರರು ಕೆಲವರು ಸಮುದ್ರದ ಕಡೆಗೆ ಓಡಲು ತೊಡಗಿದ್ದರು. ಮರಗಳ ಗುಂಪಿನೊಳಗೆ ಬಹಳಮಂದಿ ಹೊಸ ಶತ್ರುಗಳು ಇರಬಹುದೆಂದು ಅವರಿಗೆ ಭಯ!

ಅಷ್ಟರಲ್ಲಿ ಮತ್ತೊಂದು ಕಡೆಯಿಂದ ಮೂವರು ಸೈನಿಕರು ಭೀಕರವಾಗಿ ಗರ್ಜಿಸಿ ಕಳ್ಳರ ಕಡೆಗೆ ಓಡಿ ಬಂದರು.

ಆದರೆ ಸಮುದ್ರಕೇತನು ಮಾತ್ರ ಹೆದರಲಿಲ್ಲ. ಶಿವದತ್ತನೊಂದಿಗೆ ತನ್ನ ಮಹಾಕೃಪಾಣದಿಂದ ಹೊಡೆದಾಡುತ್ತಾ ಸ್ವಲ್ಪ ಸ್ವಲ್ಪ ಹಿಂಜರಿಯಲೂ ತೊಡಗಿದನು. ಆಗಾಗ ಹಿಂದಿರುಗಿ ನೋಡುತ್ತ



"ಓಡದಿರ್ರೋ! ಶತ್ರುಗಳು ನಾಲ್ಕಾರು ಮಂದಿಯಷ್ಟೇ! ಒಮ್ಮೆಗೇ ಮುಂದೆ ಬಂದು ಹೊಡೆಯಿರಿ" ಎಂದು ಕೂಗಿ ಕೂಗಿ ಹೇಳುತ್ತಿದ್ದನು.

ತಮ್ಮ ಒಡೆಯನ ಕೂಗು ಕೇಳಿ ಧೈರ್ಯಗೊಂಡು ಕಳ್ಳರು ಹಿಂದಿರುಗಿ ಬಂದು ಶಿವದತ್ತಾದಿಗಳ ಮೇಲೆ ಮತ್ತೆ ಬಿದ್ದರು.

ನಾಲ್ಕು ನಿಮಿಷಗಳವರೆಗಷ್ಟೆ ಸರಿಸಮನಾದ ಕಾದಾಟ ನಡೆಯಿತು. ವಜ್ರಮುಷ್ಟಿಯನ್ನು ನಾಲ್ಕೈದು ಮಂದಿ ಕಳ್ಳರು ಮುತ್ತಿಕೊಂಡರು. ಆದರೆ ಅವನು ಎಲ್ಲರ ಕತ್ತಿಗಳನ್ನೂ ತಟ್ಟಿ ದೂಡಿ ತಪ್ಪಿಸಿಕೊಳ್ಳುತ್ತ, ತನ್ನ ಕೈಯಲ್ಲಿದ್ದ ಕತ್ತಿಯನ್ನು ಮಿಂಚಿನ ವೇಗದಿಂದ ತಿರುಗಿಸುತ್ತ ಅವರಲ್ಲಿ ಕೆಲವರನ್ನು ಗಾಯಪಡಿಸಿ ಕೆಡವಿದನು.

ಒಬ್ಬನು ಗಾಯಗೊಂಡು ಸಾಯುವಹಾಗೆ ಕೂಗಿ ಬಿದ್ದ ಕೂಡಲೇ, ಆ ಸ್ಥಳದಲ್ಲಿ ಇನ್ನೊಬ್ಬ ಕಳ್ಳನು ತಯಾರಾಗಿರುತ್ತಿದ್ದನು.

ಇಂತಹ ಹೋರಾಟವು ಬಹಳಹೊತ್ತು ಸಾಗಲಾರದೆಂದು ಶಿವದತ್ತನಿಗೆ ಗೊತ್ತಾಯಿತು. ಇಷ್ಟರಲ್ಲಿ ಆ ಸ್ತ್ರೀಯರು ನಿರಪಾಯವಾಗಿ ದೂರ ಹೋಗಿರಬಹುದು. ಸಮುದ್ರಕೇತು ಪ್ರಾಯದಲ್ಲಿ ಶಿವದತ್ತನಿಗಿಂತ ಚಿಕ್ಕವನು. ಅವನ ಹಡಗಿನಿಂದ ಇನ್ನೂ ಹಲವರು ಬರುವುದು ನಿಜ. ಆಮೇಲೆ ಅವರೆಲ್ಲರೊಂದಿಗೆ ತಮ್ಮಿಂದ ಹೋರಾಡುವುದು ಸಾಧ್ಯವಾಗದು. ತಾವೆಲ್ಲರೂ ಅನ್ಯಾಯದ ಸಾವಿಗೆ ಗುರಿಯಾಗುವುದರಲ್ಲಿ ಯಾವ ಅರ್ಥವೂ ಇಲ್ಲ. ಆದುದರಿಂದ ಈ ದುಷ್ಟರ ಟೋಳಿಯಿಂದ ಪಲಾಯನ ಮಾಡುವುದೇ ಒಳ್ಳೆಯದೆಂದು ಶಿವದತ್ತನು ನಿರ್ಣಯಿಸಿದನು. ಆ ಅನಾಥ ಸ್ತ್ರೀಯರನ್ನು ಕಾಪಾಡುವ ಆಪದ್ಬಾಂಧವ್ಯತೆಯ ಉದ್ದೇಶ ಸಿದ್ಧಿಸಿತೆಂದೇ ನಂಬೋಣವೆಂದುಕೊಂಡು ಶಿವದತ್ತನು "ಜೈ ಮರಾಳೀ!" ಎಂದು ಒಂದು ದೊಡ್ಡ ಕೂಗುಹಾಕಿ, ಸಮುದ್ರಕೇತನ ಟೊಂಕದ ಮೇಲೊಂದು ಬಲವಾಗಿ ಒದ್ದನು. ಸಮುದ್ರಕೇತನು ಆ ಪೆಟ್ಟಿಗೆ ಹಿಂದಕ್ಕೆ ಬಿದ್ದು ಮತ್ತೆ ಏಳುವುದರೊಳಗೆ ಶಿವಧತ್ತನು ತನ್ನವರಿಗೆ ಕೈಸನ್ನೆ ಮಾಡಿ, ಮರಗಳ ಗುಂಪಿನೊಳಗೆ ಓಡಿದನು.

ಅವನ ಸೂಚನೆಯನ್ನರಿತು, ಮಂದರದೇವನೂ ಸೈನಿಕರೂ ಹಿಂದಡಿ ತೆಗೆದರು. ಕಣ್ಣುಮುಚ್ಚಿ ಬಿಡಿಸುವುದರೊಳಗೆ ಶಿವದತ್ತ, ಮಂದರದೇವ ಮೊದಲಾದವರು ಮರಗಳ ಗುಂಪಿನೊಳಗೆ ತೂರಿ ಮಾಯವಾದರು. ಸಮುದ್ರ ಚೋರನಿಗೆ ಇದೊಂದು ಇದಿರುನೋಡದ ಆಘಾತವಾದುದರಿಂದ ಬೆಕ್ಕಸಗೊಂಡು ನಿಂತುಬಿಟ್ಟನು. (ಇನ್ನೂ ಇದೆ)





# ಆಶ್ರಮಧರ್ಮ

ಜೀವವಿರುವವರೆಗೂ ಹಿಡಿದ ಕೆಲಸ ಮುಗಿಸದೆ ಬಿಡಲಾರೆನೆಂಬ ಹಟಹಿಡಿದ ರಾಜಾ ತ್ರಿವಿಕ್ರಮನು ಮತ್ತೆ ಮರದಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೆ ಹೊತ್ತುಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಬೇತಾಳವು ಮಾತಾಡಲು ತೊಡಗಿ, " ಎಲೈ ಮಹಾರಾಜನೇ, ಪ್ರಜಾಪರಿಪಾಲಕರಿಗೆ ಸಮಾಜದಲ್ಲಿರುವ ಗೌರವ ಮರ್ಯಾದೆಗಳು, ವೇದಾಂತಿಗಳಿಗೂ, ತತ್ವಜ್ಞಾನಿಗಳಿಗೂ, ಸಾಧುಸನ್ಯಾಸಿಗಳಿಗೂ ಇದ್ದೇ ಇರುತ್ತದೆಂದು ನಿನಗೆ ಗೊತ್ತೇ ಇರಬೇಕು. ಆದರೆ ಸಮಾಜದ ಕ್ಷೇಮಾಭಿವೃದ್ಧಿಗಳ ವಿಷಯದಲ್ಲಿ ಅವರ ಆಲೋಚನೆಗಳೂ, ಗಣನೆಗಳೂ ಬೇರೆ ಬೇರೆ ವಿಧವಾಗಿರುವುದು ಮಾತ್ರವಲ್ಲದೆ, ಒಂದೊಂದು ಸಾರಿ ಪರಸ್ಪರ ವಿರುದ್ಧವಾಗಿಯೂ ಇರುತ್ತದೆ. ಇಂತಹ ರಾತ್ರಿಯ ಹೊತ್ತಿನಲ್ಲಿ ಇಷ್ಟೊಂದು ಶ್ರಮದಿಂದ ಕೂಡಿದ ಇಂತಹ ಸಾಹಸದ ಕೆಲಸಕ್ಕೆ ನಿನ್ನನ್ನು ಹುರಿಗೊಳಿಸಿದವರು ಅಂಥವರಲ್ಲಿ ಯಾರೋ ಒಬ್ಬರೆಂದು ನನಗೆ ಅನುಮಾನವಾಗುತ್ತದೆ. ಈ ವಿಷಯದಲ್ಲಿ ನೆನಪಾಗುವ

ಬೇತಾಳ ಕಥೆಗಳು?...



ಒಂದು ಕಥೆಯನ್ನು ಹೇಳುತ್ತೇನೆ ಕೇಳು. ನಿನಗೆ ನಡೆಯುವ ಶ್ರಮವಾದರೂ ಸ್ವಲ್ಪ ತಗ್ಗುತ್ತದೆ" ಎಂದು ಹೇಳಿ ಕಥೆಯನ್ನು ಪ್ರಾರಂಭಿಸಿತು :

ಅನೇಕ ವರ್ಷಗಳ ಹಿಂದೆ ಪ್ರವಾಳ ದೇಶದ ಮುಖ್ಯನಗರಗಳಲ್ಲಿ ಒಂದಾದ ರಾಜಗಿರಿಯ ಹೊರ ಭಾಗದಲ್ಲಿ, ಸಹಜಾನಂದನೆಂಬ ಪಂಡಿತನು ಆಶ್ರಮ ವನ್ನು ನಿರ್ಮಿಸಿಕೊಂಡು, ತನ್ನ ಹತ್ತಿರಬಂದು ಸೇರಿದ ಶಿಷ್ಯರಿಗೆ, ವೇದಾಂತ ಶಾಸ್ತ್ರಗಳನ್ನೂ, ಉಪನಿ ಷತ್ತುಗಳ ತತ್ವಾರ್ಥಗಳನ್ನೂ ವ್ಯಾಖ್ಯಾನಗಳೊಂದಿಗೆ ಬೋಧಿಸುತ್ತಿದ್ದನು. ದೇಶದ ಜನಸಮುದಾಯಕ್ಕೆ ಎಂಬತ್ತು ವಯಸ್ಸಿನ ಹಣ್ಣುಮುದುಕನಾದ ಸಹಜಾ ನಂದನ ಮೇಲೆ ಎಷ್ಟೋ ಭಕ್ತಿ ವಿಶ್ವಾಸಗಳಿದ್ದುವು. ಆಶ್ರಮವಾಸಿಯಾಗುವುದಕ್ಕಿಂತ ಮೊದಲು ಆತನು ಪ್ರವಾಳದೇಶದ ರಾಜಕುಟುಂಬದವರಿಗೆ ವಿದ್ಯಾ ಬೋಧನೆಮಾಡುವ ಮುಖ್ಯೋಪಾಧ್ಯಾಯನಾಗಿದ್ದ ವನು. ಅಂತಲೇ ಪ್ರಜೆಗಳಿಗೆ ಅವನಮೇಲೆ ಅಷ್ಟು ಭಕ್ತಿ.

ಪ್ರವಾಳದೇಶದ ಮುಖ್ಯರಾಜಧಾನಿ ಪ್ರಾಕಾರ ಪುರವಾಗಿದ್ದಿತು. ಅಲ್ಲಿ ರಾಜಾ ನಂದೀಕೇಶ್ವರನು ಸಮರ್ಥನಾದ ಪರಿಪಾಲಕನಾಗಿದ್ದನು. ಅವನು ಪರಿಪಾಲನೆ ಸುಗಮವಾಗ ಬೇಕೆಂದುಕೊಂಡು ತನ್ನ ರಾಜ್ಯದೊಳಗಿನ ಮುಖ್ಯವೆನಿಸುವ ನಗರಗಳೆಲ್ಲದಕ್ಕೂ, ಯೋಗ್ಯರೂ, ಶಕ್ತಿಶಾಲಿಗಳೂ ಆದವರನ್ನು ಪ್ರಧಾ ನಾಧಿಕಾರಿಗಳಾಗಿ ನಿಯಮಿಸುತ್ತಿದ್ದನು.

ಒಂದುಸಾರಿ ರಾಜಗಿರಿ ನಗರಾಧಿಕಾರಿಯನ್ನು ಕುರಿತು ನಂದಿಕೇಶ್ವರ ರಾಜನ ಸನ್ನಿಧಿಗೆ ಕೆಲವು ಫಿರ್ಯಾದಿಗಳು ಬಂದುವು. ಆ ನಗರದ ಮುಖ್ಯಾಧಿ ಕಾರಿ ಅಸಮರ್ಥನೆಂದೂ, ನಗರವೂ, ಅದರ ಸುತ್ತು ಮುತ್ತಣ ಪ್ರದೇಶವೂ ಕೆಟ್ಟ ಅರಾಜಕ ಪರಿಸ್ಥಿತಿಗೆ ಒಳಗಾಗಿವೆಯೆಂದೂ ಪ್ರಜೆಗಳು ರಾಜನ ಬಳಿಯಲ್ಲಿ ಬಿನ್ನವಿಸಿಕೊಂಡಿದ್ದರು. ಅಲ್ಲಿ ನಡೆಯುವ ಅನ್ಯಾಯ ಗಳಿಗೂ, ಅಕ್ರಮ, ಅನೀತಿಗಳಿಗೂ ಕಾರಣನಾದವನು ದುರ್ಜಯನೆಂಬವನೇ. ಅವನು ಮಹಾರಾಣಿಯ ಬಂಧುವರ್ಗದವನಾಗಿದ್ದು, ಆಕೆಯ ಅಭಿಮಾನಕ್ಕೆ ಪಾತ್ರನಾದವನಾದುದರಿಂದ, ನಗರಾಧಿಕಾರಿಗೆ ಆತನನ್ನು ಹದ್ದಿನಲ್ಲಿರಿಸಿಕೊಳ್ಳಲು ಸಾಧ್ಯವಾಗದೆ ಹೋಗಿತ್ತು. ಅದರ ಮೇಲೆ ದುರ್ಜಯನು ಬಹಳ ಕಾಲದಿಂದ ನಗರಪಾಲಕನಾಗಬೇಕೆಂಬ ಪ್ರಯತ್ನದಲ್ಲಿದ್ದವನು.

ಮಹಾರಾಣಿಯ ಬಂಧುವಾದ ದುರ್ಜಯನ ದುಷ್ಟತನಗಳನ್ನು ಕುರಿತು ಮಂತ್ರಿಗೆ ಗೊತ್ತಿದ್ದರೂ, ರಾಜನೊಂದಿಗೆ ಹೇಳುವುದರಿಂದ ಹೆಚ್ಚಿನ ತೊಂದರೆ ಗಳು ಬರುವುವೇನೋ ಎಂದು ಶಂಕಿಸಿ ಮಂತ್ರಿ ರಾಜನೊಂದಿಗೆ "ಮಹಾರಾಜರೇ, ರಾಜಗಿರಿನಗರಕ್ಕೆ ಮತ್ತೊಬ್ಬ ಹೊಸ ಅಧಿಕಾರಿಯನ್ನು ಕಳುಹಿಸ ಬೇಕಾದ ಅಗತ್ಯವಿರುವ ಹಾಗೆ ಕಾಣುತ್ತದೆ. ಅದಕ್ಕೆ ಎಲ್ಲಾ ವಿಧದಲ್ಲಿಯೂ ಪ್ರತಾಪನೆಂಬ ಯುವಕನು ಸಮರ್ಥನಿರುವಂತೆ ಕಾಣುತ್ತದೆ. ನಮ್ಮ ಆಸ್ಥಾನದ

ಉದ್ಯೋಗದಿಂದ ಅವನನ್ನು ಅಲ್ಲಿಗೆ ವರ್ಗಾಯಿಸಲು ತಮ್ಮ ಅಪ್ಪಣೆಯಾದೀತೆ ? " ಎಂದು ವಿನಯದಿಂದ ಕೇಳಿದನು.

ರಾಜನು ಅದಕ್ಕೆ ಅನುಮತಿ ನೀಡಿದನು. ಮಂತ್ರಿ ಅದೇದಿನ ಪ್ರತಾಪನನ್ನುಕರೆದು, ರಾಜನು ಅವನನ್ನು ರಾಜಗಿರಿ ನಗರದ ಪ್ರಧಾನಾಧಿಕಾರಿಯಾಗಿ ನಿಯಮಿಸಿರುವುದರಿಂದ, ಕೂಡಲೇ ಅಲ್ಲಿಗೆ ಹೊರಟು ಹೋಗಬೇಕೆಂದು ಆಜ್ಞೆ ಮಾಡಿದನು. ಇದು ಪ್ರತಾಪನಿಗೆ ಥಕ್ಕನೆ ಬಂದ ಸಮಸ್ಯೆಯೂಯಿತು.

ಪ್ರತಾಪನಿಗೆ ಮಂತ್ರಿಯ ಮೇಲೆ ತುಂಬಾ ಭಕ್ತಿ, ಗೌರವ, ವಿಶ್ವಾಸಗಳಿದ್ದುವು. ಆದರೂ ಈ ನಿಯಾಮಕವು ಅವನಿಗೆ ಬಹಳ ಚಿಂತೆಯನ್ನುಂಟು ಮಾಡಿತು. ತನ್ನಂತಹ ಸಮರ್ಥನಾದವನನ್ನು ರಾಜಧಾನಿಯಿಂದ ತಪ್ಪಿಸಿ. ಬಹುದೂರಕ್ಕೆ ಹೋಗುವಂತೆ ಹೇಳುವುದಕ್ಕೆ ಕಾರಣ. ಯಾವುದೋ ಮಂತ್ರಿಯ ಸ್ವಾರ್ಥ ಸಾಧನೆಯೇ ಇರಬೇಕೆಂದು . ಅವನಿಗೆ ತೋರಿತು. ತಾನು ಹುಟ್ಟಿ, ಬೆಳೆದ ಪರಿಸರಗಳನ್ನೆಲ್ಲ ಬಿಟ್ಟು, ದೂರದಲ್ಲಿರುವ ಹೊಚ್ಚ ಹೊಸ ಸ್ಥಳಕ್ಕೆ ಹೋಗುವುದರಲ್ಲಿ ಅವನು ನಿಸ್ಪೃಹತೆಯ ನೀರಸಭಾವವನ್ನು ತಾಳಿದನು. ಏನಾದರೂ ರಾಜಾಜ್ಞೆಯನ್ನು ಮೀರುವಂತಿಲ್ಲವಷ್ಟೆ ?

ಹೀಗೆ ಇಷ್ಟವಿಲ್ಲದೆಯೇ ಪ್ರತಾಪನು ರಾಜಗಿರಿಗೆ ಹೊರಟನು. ಅವನು ಏರಿಕೊಂಡ ರಥದ ಮುಂದೆಯೂ ಹಿಂದೆಯೂ ಹತ್ತು ಹತ್ತು ಮಂದಿ ಕುದುರೆರಾಹುತರು ಆಯುಧಧಾರಿಗಳಾಗಿ ಸಾಗುತ್ತಿದ್ದರು.

ಒಂದು ದಿನ ಬೆಳಗ್ಗಿನ ಹೊತ್ತಿನಲ್ಲಿ ಅವನ ರಥವು ರಾಜಗಿರಿಯ ನೆರೆಯಲ್ಲಿರುವ ಆಶ್ರಮದ ಹತ್ತಿರ ಬಂದಿತು. ವಿಶಾಲವಾದ ಮರದ ಕೆಳಗೆ ತನ್ನ ಪ್ರಧಾನ ಶಿಷ್ಯನಾದ ಚಿನ್ಮಯನೊಂದಿಗೆ ಏನೋ ಚರ್ಚಿಸಿಕೊಂಡಿದ್ದ ಸ ಹ ಜಾ ನ ಂ ದ ರ ನ್ನು ಪ್ರತಾಪನು ನೋಡಿದನು. ಬ್ರಹ್ಮತೇಜಸ್ಸು ಚಿಮ್ಮಿಕೊಂಡಿರುವ ಅವರ ರೂಪವನ್ನೂ, ಪ್ರಶಾಂತವಾದ ಆಶ್ರಮ ವಾ ತಾ ವ ರ ಣ ವ ನ್ನೂ, ನೋಡಿದ ಕೂಡಲೇ, ಮೊದಲೇ ಚಿಂತೆಯಲ್ಲಿರುವ ಪ್ರತಾಪನಲ್ಲಿ ಥಕ್ಕನೆ





ದಿಲ್ಲ ಸ್ವಾಮಿ. ತಾವು ಅಂಗೀಕರಿಸಿದರೆ ತಮ್ಮ ಶಿಷ್ಯರಲ್ಲಿ ಒಬ್ಬನಾಗಿ ಇಲ್ಲಿಯೇ ಇದ್ದು ಬಿಡ ಬೇಕೆಂದು ಬಯಸುತ್ತೇನೆ. ತಮ್ಮ ಶಿಷ್ಯನಾಗಿಲು ತಕ್ಕ ಯೋಗ್ಯತೆ ನನಗಿದೆಯೆಂದು ಭಾವಿಸುತ್ತೇನೆ ಅಪ್ಪಣೆಯಾಗಬೇಕು" ಎಂದು ಪ್ರಾರ್ಥಿಸಿದನು.

ಸಹಜಾನಂದಸ್ವಾಮಿ ಕೆಲವು ಕ್ಷಣ ಪ್ರತಾಪನನ್ನು ಪರೀಕ್ಷಿಸುವಂತೆ ನೋಡಿ, ಆ ಮೇಲೆ ಕೋಪಮಿಶ್ರಿತ ಧ್ವನಿಯಲ್ಲಿ, "ನನ್ನನ್ನು ಯಾರೆಂದು ತಿಳಿದೆ ? ನಾನು ಸರ್ವಸಂಗಪರಿತ್ಯಾಗಿಯಾದ ಸನ್ಯಾಸಿಯಲ್ಲ. ಲೋಕ ವ್ಯವಹಾರಗಳ ಮೇಲೆ ಆಸಕ್ತಿ ಇಟ್ಟು, ನ್ಯಾಯ ಅನ್ಯಾಯ, ಧರ್ಮ ಅಧರ್ಮಗಳನ್ನು ಕುರಿತು ಬೋಧಿಸುವ ಚರ್ಚಿಸುವ ತಾತ್ವಿಕನು ನಾನು. ನಿನ್ನನ್ನು ಕುರಿತು ನನಗೆ ಎಲ್ಲವೂ ಗೊತ್ತಿದೆ. ಇಷ್ಟು ಚಿಕ್ಕ ವಯಸ್ಸಿನಲ್ಲಿ ನಿನಗೆ ಇಷ್ಟೊಂದು ವೈರಾಗ್ಯ ಭಾವನೆ ಬರಬೇಕಾದ ಅಗತ್ಯವೇನಿಲ್ಲ. ಅದು ತಪ್ಪು ಕೂಡಾ. ಇದು ಸ್ಮಶಾನ ವೈರಾಗ್ಯದಂತೆ ಕ್ಷಣಿಕವಾದುದು. ನೀನು ಇಲ್ಲಿ ನನಗೆ ಶಿಷ್ಯನಾಗಿರಲು ತಕ್ಕವನೇ ಅಲ್ಲ" ಎಂದರು.

ಪ್ರತಾಪನು ತಲೆತಗ್ಗಿಸಿ ಅವರಿಗೆ ನಮಸ್ಕಾರ ಮಾಡಿ, ಮತ್ತೇನೂ ಮಾತಾಡದೆ ರಥವನ್ನು ಏರಿ ಮುಂದೆ ಹೋದನು.

ಸ್ವಲ್ಪ ಹೊತ್ತಿನ ಮೇಲೆ ಪಲ್ಲಕಿಯಲ್ಲಿ ದುರ್ಜಯನು ಆಶ್ರಮದ ಬಳಿಗೆ ಬಂದನು. ಅವನ ಹಿಂದಿನಿಂದ ಕೆಲವು ಮಂದಿ ಅನುಚರರೂ ಇದ್ದರು. ಆಶ್ರಮದ ಬಳಿಯಲ್ಲಿ ದುರ್ಜಯನು ಪಲ್ಲಕಿಯಿಂದ ಇಳಿದು, ಮುಂದೆ ಹೋಗಿ ಸಹಜಾನಂದರಿಗೆ ಪಾದಾಭಿವಂದನೆ ಮಾಡಿ, "ಸ್ವಾಮಿ, ಈ ಬೇಸಗೆಯಲ್ಲಿ ತಮಗೆ ಸದುಪಾಯವಾಗಿರುತ್ತದೆಂದು ಅಲ್ಲಿರುವ ತೋಟದಲ್ಲಿ, ಚಂದ್ರಶಿಲೆಯ ಮಂಟಪವನ್ನು ಕಟ್ಟಲು ಕೆಲಸದಾಳುಗಳನ್ನು ಕಳುಹಿಸಿದ್ದೇನು. ತಾವು ಅದೆಲ್ಲಾ ಬೇಡವೆಂದಿರಂತೆ. ಅದೇಕೆಂದು

ಒಂದು ಬಗೆಯ ವೈರಾಗ್ಯಭಾವವು ತಲೆಯೆತ್ತಿತು. ಕೂಡಲೇ ಪ್ರತಾಪನು ರಥದಿಂದ ಇಳಿದು ಆಶ್ರಮದ ಕಡೆಗೆ ನಡೆದನು. ದೂರದಿಂದಲೇ ಅವನನ್ನು ನೋಡಿದ ಸಹಜಾನಂದರು ಶಿಷ್ಯನೊಂದಿಗೆ ಅವನ ಬಳಿಗೆ ಬಂದರು.

ಪ್ರತಾಪನು ಸಹಜಾನಂದಸ್ವಾಮಿಗೆ ನಮಸ್ಕಾರ ಮಾಡಿ, "ನನ್ನ ಹೆಸರು ಪ್ರತಾಪ. ನಮ್ಮ ರಾಜಧಾನಿಯಾದ ಪ್ರಾಕಾರಪುರದಿಂದ ಬರುತ್ತಾ ಇದ್ದೇನೆ. ಮಹಾರಾಜರು ನನ್ನನ್ನು ರಾಜಗಿರಿ ನಗರಕ್ಕೆ ಪಾಲಕನಾಗಿರುವಂತೆ ನಿಯಮಿಸಿ ಕಳುಹಿಸಿದ್ದಾರೆ. ಆ ಪದವಿಯನ್ನು ಸ್ವೀಕರಿಸುವುದಕ್ಕೆ ಮೊದಲು ತಮ್ಮ ದರ್ಶನವಾದುದು ನನ್ನ ಅದೃಷ್ಟವೇ ಸರಿ. ಈ ಆಶ್ರಮವನ್ನೂ, ಇಲ್ಲಿಯ ಪ್ರಶಾಂತ ಸನ್ನಿವೇಶವನ್ನೂ, ಇವೆಲ್ಲವನ್ನೂ ಮೀರಿಸುವಂತಿರುವ ತಮ್ಮ ದಿವ್ಯ ಸಾನ್ನಿಧ್ಯವನ್ನೂ, ನೋಡಿದ ಮೇಲೆ, ಈ ಪದವಿಯನ್ನು ನಿರ್ವಹಿಸಬೇಕೆಂದು ನನಗೆ ಕಾಣುವು

ಗೊತ್ತಾಗಲಿಲ್ಲ. ತಮಗೆ ಇಷ್ಟೊಂದು ಸಣ್ಣ ಸೇವೆಯನ್ನು ಮಾಡಲಿಕ್ಕೆ ಕೂಡಾ ನಾನು ಅರ್ಹನಾಗಿಲ್ಲವೇ ?" ಎಂದು ಕೇಳಿದನು.

ಅದನ್ನು ಕೇಳಿ ಸಹಜಾನಂದರು ಮಂದಹಾಸದಿಂದ, "ನಿನ್ನ ಸೇವೆಯ ಮಾತು ಹಾಗಿರಲಿ. ಚಂದ್ರಕಾಂತಶಿಲೆಗಳ ಮಂಟಪವೂ, ಪಟ್ಟೆಪೀತಾಂಬರಗಳೂ, ನನ್ನಂತಹ ಪಂಡಿತರಿಗೆ ಬದ್ಧ ವೈರವೆಂಬ ಸಂಗತಿ ನಿನಗೆ ಗೊತ್ತಿಲ್ಲವೆಂದರೆ ನಂಬಲಾರೆನು. ನನಗೆ ಸೇವೆ ಮಾಡುವುದೇ ನಿಜವಾದ ನಿನ್ನ ಉದ್ದೇಶವೆಂದಾದರೆ ನೀನು ನನ್ನ ಆಶ್ರಮದಲ್ಲೇ ಏಕೆ ಇದ್ದು ಬಿಡಬಾರದು?" ಎಂದು ಕೇಳಿದರು.

ಆ ಪ್ರಶ್ನೆಯಿಂದ ದುರ್ಜಯನು ಬೆಚ್ಚುರಬಿದ್ದು, "ಗುರುದೇವಾ, ನಾನು ನಗರದಲ್ಲಿ ಎಷ್ಟೋ ವ್ಯವಹಾರಗಳಲ್ಲಿ, ವ್ಯಾಸಂಗಗಳಲ್ಲಿ ತೇಲಾಡಿಕೊಂಡಿದ್ದೇನೆ. ಆದರೂ ತಮ್ಮನ್ನು ಸದಾ ಧ್ಯಾನಿಸಿಕೊಂಡೇ ಇದ್ದೇನೆ. ಹೊರಗಿದ್ದು ಮಾಡುವುದೇ ತಮ್ಮ ಸೇವೆ ಎಂದುಕೊಂಡಿದ್ದೇನೆ. ಹಾಗಿರುವಾಗ ಆಶ್ರಮದಲ್ಲೇ ಸ್ಥಿರವಾಗಿರುವ ಅಗತ್ಯ ನನಗೇನೂ ಕಾಣುವುದಿಲ್ಲ" ಎಂದನು.

ಈ ಉತ್ತರವನ್ನು ಕೇಳಿ ಸಹಜಾನಂದಸ್ವಾಮಿ ಕೋಪದಿಂದ, "ದುರ್ಜಯಾ ! ನೀನು ನನ್ನ ಆಶ್ರಮಕ್ಕೆ ಬಂದು ಇದ್ದುಬಿಡುವಂತೆ ಎಷ್ಟೋಸಾರಿ ನಿನಗೆ ಹೇಳಿದ್ದೇನೆ. ಒಳ್ಳೆಯದರಲ್ಲಿ ಮನಃಪೂರ್ವಕವಾಗಿ ಆಹ್ವಾನಿಸಿದ್ದೇನೆ. ಆದರೂ ಏಕೋ ನೀನು ಸಂದೇಹಪಡುತ್ತಾ ಇರುವೆ. ಇದರಿಂದ ನಿನಗೆ ನನ್ನ ಮೇಲೆ ತ್ರಿಕರಣಶುದ್ಧಿಯಾಗಿ ಗುರುಭಾವವಿಲ್ಲವೆಂದು ಸ್ಪಷ್ಟವಾಗುತ್ತದೆ. ಏನೋ ಸ್ವಲಾಭದ ಆಶೆಯಿಂದಲೇ ನನ್ನ ಮೇಲೆ ಭಕ್ತಿಗೌರವವನ್ನು ನಟಿಸುವೆಯೆಂದು ಅನುಮಾನಿಸುತ್ತೇನೆ. ಕಡೇ ಪಕ್ಷ ಕೇವಲ ಆರು ತಿಂಗಳವರೆಗಾದರೂ ನೀನು ನನ್ನ ಆಶ್ರಮದಲ್ಲಿ ಏಕೆ ಇರಬಾರದು ?" ಎಂದರು.



ಇದುವರೆಗೂ ಸಹಜಾನಂದಸ್ವಾಮಿ ದುರ್ಜಯನನ್ನು ಇಷ್ಟು ಒತ್ತಾಯಮಾಡಿ ಕೋಪಿಸಿರಲಿಲ್ಲ. ತನ್ನ ಕೈಕೆಳಗಿನವರ ಮುಂದೆ ಅವರು ಹೀಗೆ ಹೇಳಿದಾಗ ದುರ್ಜಯನು ಹೆದರಿ ನಡುಗುತ್ತ, "ನಾನು ಆಶ್ರಮವಾಸ ಮಾಡಲೇ ಬೇಕೆಂದು ತಾವು ಇಷ್ಟು ಗಟ್ಟಿಯಾಗಿ ಆಜ್ಞೆಮಾಡುವಿರಾದರೆ, ಈ ಕ್ಷಣದಿಂದ ಇಲ್ಲಿಯೇ ಇದ್ದು ಬಿಡುತ್ತೇನೆ" ಎಂದು ತನ್ನ ಅಧಿಕಾರದ ಪೇಟವನ್ನೂ, ಬಿಲ್ಲೆಪಟ್ಟಿಯನ್ನೂ ತೆಗೆದು ಕೆಳಗಿಟ್ಟನು.

ಸಹಜಾನಂದಸ್ವಾಮಿ ತೃಪ್ತಿಯಿಂದ ತಲೆಯಾಡಿಸಿದರು. ಆದರೆ ಅವರ ಪ್ರಧಾನ ಶಿಷ್ಯ ಚಿನ್ಮಯನಿಗೆ ಮಾತ್ರ ಅದೇನೂ ಹಿಡಿಸಿದಂತೆ ಕಾಣಲಿಲ್ಲ. ತನ್ನ ಗುರುವಿಗೆ ಏನಾದರೂ ಮತಿಚಾಂಚಲ್ಯ ಬಂತೇ ಎಂಬ ಅನುಮಾನದಿಂದ ಗುರುವಿನ ಮುಖವನ್ನು ನೋಡಿದನು. ಅದನ್ನು ನೋಡಿ ಸಹಜಾನಂದರು ಸುಮ್ಮನಿರುವಂತೆ ಅವನಿಗೆ ಕೈಸನ್ನೆ ಮಾಡಿದರು.

ಬೇತಾಳವು ಇಲ್ಲಿಗೆ ಕಥೆಯನ್ನು ನಿಲ್ಲಿಸಿ, "ರಾಜಾ, ಸಹಜಾನಂದರನ್ನು ಕುರಿತು ಚಿನ್ಮಯನಿಗೆ ಬಂದ ಅನುಮಾನವೇ ನನಗೂ ಬರುತ್ತದೆ. ಆಶ್ರಮದಲ್ಲಿರುತ್ತೇನೆಂದು ತಾನಾಗಿ ಕೇಳಿದ ಪ್ರತಾಪನು ಅದಕ್ಕೆ ಅನರ್ಹನೆಂದು ಕೋಪದಿಂದ ಬುದ್ಧಿ ಹೇಳಿ ಕಳುಹಿಸಿಕೊಟ್ಟು, ರಾಜಗಿರಿ ನಗರದಲ್ಲಿ ಮಹಾ ದುಷ್ಟನೆಂದು ಹೆಸರು ಪಡೆದ ದುರ್ಜಯನನ್ನು ಆಶ್ರಮದಲ್ಲಿರುವಂತೆ ಒತ್ತಾಯಿಸುವುದೆಂದರೆ ವಿಚಿತ್ರವಾಗಿಲ್ಲವೇ ? ಸಹಜಾನಂದರ ಈ ವಿಚಿತ್ರ ಪ್ರವರ್ತನೆಗೆ ಕಾರಣವೇನು ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆಹೋದರೆ ನಿನ್ನ ತಲೆ ಒಡೆದು ಪುಡಿ ಪುಡಿಯಾಗಿ ಚೆದರಿಹೋಗುವುದು ನಿಜ !" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಸಹಜಾನಂದರ ಪ್ರವರ್ತನೆಯಲ್ಲಿ ವಿಚಿತ್ರವೂ ಇಲ್ಲ, ಆಶ್ಚರ್ಯವೂ ಇಲ್ಲ. ಅವರು ಪಂಡಿತರಾಗಿ, ತತ್ವವೇತ್ತರಾಗಿ, ಸಮಾಜದ ಉದ್ಧಾರದಲ್ಲಿ ತನ್ನ ಬಾಧ್ಯತೆಯನ್ನು ನಿರ್ವಹಿಸಿಕೊಂಡಿರುವವರು. ರಾಜಾ ನಂದಿಕೇಶ್ವರನು ಅರಾಜಕ ಸ್ಥಿತಿಗೆ ಬಂದಿರುವ ರಾಜಗಿರಿಯ ಪರಿಪಾಲಕನಾಗಿ ಪ್ರತಾಪನನ್ನು ಕಳುಹಿಸಿರುವನೆಂದು ತಿಳಿದಕೂಡಲೇ, ಆ ಯುವಕನು ಆ ಕಾರ್ಯದಲ್ಲಿ ಸಮರ್ಥನಾದವನೆಂದು ಅವರಿಗೆ ಗೊತ್ತಾಗಿದೆ. ಅಂಥವರ ಸ್ಥಾನ ಆಶ್ರಮದಲ್ಲಿ ಅಲ್ಲ; ಜನಸಮುದಾಯದ ಮಧ್ಯಲ್ಲಿಯೇ. ಇನ್ನು ದುರ್ಜಯನ ಸಂಗತಿ ಹಾಗಲ್ಲ. ನಗರದ ಅರಾಜಕ ಸ್ಥಿತಿಗೆಲ್ಲಾ ಅವನೇ ಕಾರಣನಾದವನು. ತಾನು ಮಹಾರಾಣಿಯ ಬಂಧುವೆಂಬ ಗರ್ವ ಬೇರೆ ಅವನಲ್ಲಿದೆ. ಅಂಥವನನ್ನು ಕೆಲವು ತಿಂಗಳು ತನ್ನ ಆಶ್ರಮದಲ್ಲಿಟ್ಟುಕೊಂಡರೆ ಅವನನ್ನು *ಅಡ್ಡದಾರಿ ಹಿಡಿಸುವ ಗೆಳೆಯರನ್ನು ಕಠಿಣವಾಗಿ ಶಿಕ್ಷಿಸುವ ಅವಕಾಶ ಬರುತ್ತದೆ, ಆಮೇಲೆ ದುರ್ಜಯನು ಆಶ್ರಮದಿಂದ ಹೋದರೂ ಅನುಚರರನ್ನು ಕಳೆದುಕೊಂಡು ಏಕಾಂಗಿಯಾಗುತ್ತಾನೆ. ಆಗ ಅವನನ್ನು ಹತೋಟಿಯಲ್ಲಿರಿಸಲು ಪ್ರತಾಪನಂತಹವನಿಗೆ ಸುಲಭ ಸಾಧ್ಯವಾಗುತ್ತದೆ. ಅಲ್ಲದೆ ಆಶ್ರಮವಾಸದಿಂದ ದುರ್ಜಯನು ಒಳ್ಳೆಯವನಾಗಿ ಪರಿವರ್ತನೆಯಾಗಲೂ ಬಹುದು. ಇದನ್ನೆಲ್ಲ ಆಲೋಚನೆ ಮಾಡಿಯೇ ಸಹಜಾನಂದಸ್ವಾಮಿ ದುರ್ಜಯನ ವಿಷಯದಲ್ಲಿ ಭಿನ್ನ ಪ್ರವರ್ತನೆ ತೋರಿಸಿದ್ದಾರೆ. ಅವರ ಉದ್ದೇಶ ಶಿಕ್ಷಿಸುವುದಲ್ಲ; ತಿದ್ದಿ ಸರಿಪಡಿಸುವುದೇ".

ರಾಜನಿಗೆ ಈ ವಿಧವಾಗಿ ಮೌನಭಂಗವಾದ ಕೂಡಲೇ ಬೇತಾಳವು ಅವನ ಹೆಗಲಿನಿಂದ ಶವ ಸಮೇತವಾಗಿ ಹಾರಿಹೋಗಿ ಎಂದಿನಂತೆ ಮರದ ಕೊಂಬೆಯನ್ನು ಹಿಡಿದು ನೇತಾಡಿತು.





# ಜ್ಞಾನಿ-ಅಜ್ಞಾನಿ

ಅನೇಕ ವರ್ಷಗಳ ಹಿಂದೆ ಶಶಾಂಕ ನಗರದ ಸಮೀಪವಿರುವ ಗುಡ್ಡಗಾಡುಗಳಲ್ಲಿ ಅಡಗಿಕೊಂಡು ವೀರೇಶನೆಂಬೊಬ್ಬ ದೊಡ್ಡ ಕಳ್ಳನಿದ್ದನು. ಅವನು ತನ್ನ ಕೂಟದವರೊಂದಿಗೆ ದಾರಿಯಲ್ಲಿ ಹೋಗುವವರನ್ನು ದೋಚಿಕೊಳ್ಳುತ್ತ ಆಗಾಗ ನಗರದಲ್ಲಿಯೂ ಕಳವು ಮಾಡುತ್ತಿದ್ದನು.

ಒಂದುದಿನ ವೀರೇಶನು ನಗರದಲ್ಲಿ ಕಳ್ಳತನ ಮಾಡಿಬರಲು ತನ್ನ ಮೂವರು ಅನುಚರರನ್ನು ಕಳುಹಿಸಿಕೊಟ್ಟನು. ಒಂದುವಾರ ಕಳೆದ ಮೇಲೆ ಅವರಲ್ಲಿ ಒಬ್ಬನು ಮಾತ್ರ ಬರಿಗೈಯಲ್ಲಿ ಹಿಂದಿರುಗಿ ಬಂದು, ಚಿಂತೆಯಿಂದ ತಲೆ ಬಗ್ಗಿಸಿ ನಿಂತುಕೊಂಡನು.

ವೀರೇಶನು ಅವನನ್ನು ನೋಡಿ, "ಉಳಿದಿಬ್ಬರು ಭಟರ ಕೈಗೆ ಸಿಕ್ಕಿಬಿದ್ದರೆ ?" ಎಂದು ಕೇಳಿದನು.

"ಅವರಿಬ್ಬರೂ ಸಿಕ್ಕಿಬಿದ್ದದ್ದು ರಾಜಭಟರ ಕೈಗೆ ಅಲ್ಲ. ಧರ್ಮಚೂಡನೆಂಬೊಬ್ಬ ಗಟ್ಟಿ ವಾಚಾಳಿಯ ಕೈಗೆ" ಎಂದನು ಕಳ್ಳ.

ವೀರೇಶನು ಸಿಟ್ಟಿನಿಂದ ನಡೆದುದೇನೆಂದು ವಿವರಿಸುವಂತೆ ಹೇಳಿದನು. ಕಳ್ಳನು ಹೀಗೆಂದನು: "ನಾವು ಮೂವರೂ ಹಗಲೆಲ್ಲಾ ನಗರದೊಳಗಿನ ಧನಿಕರ ಮನೆಗಳನ್ನು ಹೊಂಚು ಹಾಕುತ್ತ ಕಳೆದೆವು. ರಾತ್ರಿಯಲ್ಲಿ ಒಂದು ಸತ್ರದಲ್ಲಿ ಮಲಗಲು ಹೋದೆವು ನಾಲ್ಕು ದಿನಗಳ ಕೆಳಗೆ ಆ ಸತ್ರದ ಮುಂದೆ ಇರುವ ಗುಡಿಯ ಮಂಟಪದಲ್ಲಿ ಧರ್ಮಚೂಡನೆಂಬ ದೊಡ್ಡ ಜ್ಞಾನಿ ಬಂದು ಉಳಿದುಕೊಂಡಿರುವನೆಂದೂ, ಅವನು ಶಾಸ್ತ್ರ ಪುರಾಣಗಳೊಳಗಿನ ಧರ್ಮ ವಿಷಯಗಳನ್ನು ಹೇಳುತ್ತಾನೆಂದೂ ಗೊತ್ತಾಯಿತು. ಏನೋ ಕಾಲಕ್ಷೇಪವಾಗುತ್ತದೆಂದುಕೊಂಡು ಆ ಜನರ ಗುಂಪಿನಲ್ಲಿ ನಾವು ಮೂವರು ಕೂಡಾ ಹೋಗಿ ಸೇರಿಕೊಂಡೆವು. ಹಾಗೆ ಎರಡುದಿನ ರಾತ್ರಿಯಲ್ಲಿ ಅವನ ಧರ್ಮದ ಮಾತುಗಳನ್ನು ಕೇಳುತ್ತಿರುವಾಗ, ನನ್ನ ಜತೆಗಾರರಲ್ಲಿ ಮಾರ್ಪಾಡು ಬಂದಿತು. ಛೀ, ಛೀ ! ಅನ್ಯಾಯವಾಗಿ ಜನರನ್ನು ಹೊಡೆದು ಕಳ್ಳತನ ಮಾಡುತ್ತ ಎಷ್ಟು ಪಾಪಕಟ್ಟಿಕೊಂಡೆವಲ್ಲಾ ಎಂದು ಹೇಳಿಕೊಂಡು ನನ್ನನ್ನು ಬಿಟ್ಟುಹೋಗಿ ಧರ್ಮಚೂಡನ ಪಾದಕ್ಕೆ ಬಿದ್ದು ಅವನ ಶಿಷ್ಯರಾಗಿಬಿಟ್ಟರು."

ಈ ಸಂಗತಿ ಕೇಳಿದ ಕೂಡಲೇ ವೀರೇಶನು ಅತ್ಯುಗ್ರನಾಗಿ "ಮತ್ತೆ ನೀನು ?" ಎಂದನು. "ನಾನೂ ಇನ್ನು ಇಂಥಾ ಪಾಪ ಮಾಡಬಾರ

ವೈ. ಸುಧಾಕರರಾವು

ದೆಂದೇ ಇದ್ದೇನೆ. ನಿಮ್ಮ ಮುಂದೆ ಇದನ್ನು ಹೇಳಿ ಹೋಗೋಣವೆಂತಲೇ ಬಂದೆ." ಎಂದನು ಆ ಕಳ್ಳ.

"ಓಹೋ!" ಎಂದು ವೀರೇಶನು ತಲೆಯಾಡಿಸಿ, "ಈ ರಾತ್ರಿ ನೀನು ಇಲ್ಲೇ ಇರು. ನಾನು ನಗರಕ್ಕೆ ಹೋಗಿ ಆ ಧರ್ಮಚೂಡನ ಸಮಾಚಾರ ನೋಡಿ ಬರುತ್ತೇನೆ" ಎಂದನು.

ಆ ರಾತ್ರಿ ವೀರೇಶನು ಹೋಗಿ ನೋಡಿದಾಗ, ಗುಡಿಯ ಮಂಟಪದಲ್ಲಿ ಧರ್ಮಚೂಡನು ಪುರಾಣ ಪ್ರವಚನ ಮಾಡುತ್ತಿದ್ದನು. ಜನರು ಮೈಮರೆತು ಅವನ ವಚನ ಮಾಧುರ್ಯವನ್ನು ಕೇಳುತ್ತಿದ್ದರು.

ವೀರೇಶನು ಜನರ ಗುಂಪಿನಲ್ಲಿದ್ದ ಒಬ್ಬ ವೃದ್ಧನನ್ನು ಮಾತಾಡಿಸಿ, "ಅವರು ಹೇಳುವುದನ್ನು ಕೇಳುತ್ತ ಎಲ್ಲರೂ ಇಷ್ಟೊಂದು ಸಂತೋಷಪಡಲು ಕಾರಣವಾದರೂ ಏನು?" ಎಂದು ಕೇಳಿದನು.

"ಅವರು ದೊಡ್ಡ ಜ್ಞಾನಿಗಳು!" ಎಂದನು ಆ ವೃದ್ಧ. "ಒಂದು ಮಾತಿನಲ್ಲಿ ಹೀಗೆ ಹೇಳಿದ ರಾಯಿತೆ? ಇದರ ಹಿಂದೆ ಏನೋ ರಹಸ್ಯವಿರಬೇಕು" ಎಂದ ವೀರೇಶ.

ಅವನ ಮಾತಿಗೆ ವೃದ್ಧನು ಬೇಸರದಿಂದ, "ಆ ರಹಸ್ಯ ಅವರ ಕೈಯಲ್ಲಿರುವ ತಾಳೇ ಗರಿ ಗ್ರಂಥದಲ್ಲಿದೆ. ಅದೇ ಅವರ ಸೊತ್ತು" ಎಂದನು. ವೀರೇಶನಿಗೆ ಅಸಲು ಗುಟ್ಟು ತಿಳಿದಂತಾಯಿತು.

ಅವನು ಆ ರಾತ್ರಿ ಧರ್ಮಚೂಡನ ತಾಳೇಗರಿಯ ಗ್ರಂಥವನ್ನು ಕದ್ದುಕೊಂಡು ತನ್ನ ಗುಹೆಗೆ ಹೋದನು. ಮತ್ತೆ ನಾಲ್ಕಾರು ದಿನ ಕಳೆದು ರಾತ್ರಿಯಲ್ಲಿ ಮತ್ತೆ ಅದೇ ಗುಡಿಮಂಟಪಕ್ಕೆ ಬಂದನು.

ಧರ್ಮಚೂಡನು ಕೈಯಲ್ಲಿ ಯಾವ ಗ್ರಂಥವೂ ಇಲ್ಲದೆ ಧರ್ಮಬೋಧೆ ಮಾಡುತ್ತಾ ಇರುವುದನ್ನೂ, ಎಲ್ಲರೂ ತನ್ಮಯರಾಗಿರುವುದನ್ನೂ ನೋಡಿ ಅವನಿಗಾದ ಆಶ್ಚರ್ಯಕ್ಕೆ ಮೇರೆ ಇಲ್ಲ. ಹೇಳುತ್ತಾ ಧರ್ಮಚೂಡನು, "ನಾನು ಹೇಳುವ ಧರ್ಮಗಳ ರುಚಿಯನ್ನು ಅರಿತುಕೊಳ್ಳಬೇಕೆಂಬ ಆಶೆಯಿಂದ ಯಾವನೋ ನನ್ನ ಧರ್ಮ ಗ್ರಂಥವನ್ನು ಕೇಳದೆ ಒಯ್ದಿದ್ದಾನೆ. ಅದರೊಳಗಿನದೆಲ್ಲಾ ನನ್ನ ಮನಸ್ಸಿಗೆ ಹತ್ತಿಕೊಂಡಿರುವುದರಿಂದ, ಇನ್ನು ಅದು ಅವನಿಗೆ ಉಪಯೋಗವಾದರೆ ನನಗೆ ಸಂತೋಷವೇ." ಎಂದುದನ್ನು ಕೇಳಿ ವೀರೇಶನಿಗೆ ಇನ್ನಷ್ಟು ಬಿಸಿಬಿಸಿ ಸಂದೇಹವಾಯಿತು. ಕಂಕುಳಲ್ಲಿ ಸುತ್ತಿಕೊಂಡಿದ್ದ ಆ ಗ್ರಂಥವನ್ನು ಒಯ್ದು ಧರ್ಮಚೂಡನ ಮುಂದೆ ಇಟ್ಟು "ತಪ್ಪು ಮಾಡಿದೆ! ಇದರೊಳಗಿರುವುದೇನೆಂದು ನನಗೇನೂ ತಿಳಿಯದು.! ನನ್ನ ಮನಸ್ಸಿಗೆ ಇದೇನೂ ಹತ್ತಿಲ್ಲ! ಇದು ನಿಮ್ಮ ಮನಸ್ಸಿಗೆ ಹೇಗೆ ಹತ್ತಿತು? ನೀವೇ ತಿಳಿಸಬೇಕು!" ಎಂದು ಅಡ್ಡ ಬಿದ್ದನು.





# ಬಿಸುಡಲ್ಪಟ್ಟವಸ್ತು

ಅನೇಕ ವರ್ಷಗಳ ಹಿಂದೆ ಒಂದಾನೊಂದು ಗ್ರಾಮದಲ್ಲಿ ಗೋವಿಂದನೆಂಬ ಬಡಯುವಕನಿದ್ದನು. ಅವನಿಗೆ ಮದುವೆಯಾಯಿತು. ಇಬ್ಬರು ಮಕ್ಕಳು ಹುಟ್ಟಿದರು, ಆದರೆ ಆಸ್ತಿಪಾಸ್ತಿ ಯಾವುದೂ ಇಲ್ಲದ ಗೋವಿಂದನಿಗೆ ಈಗ ಕುಟುಂಬ ಭಾರ ಹೆಚ್ಚಿತು. ತನ್ನ ಕೈಗಳ ಕಷ್ಟದಲ್ಲಿಯೇ ಅವರನ್ನೆಲ್ಲ ಪೋಷಿಸಬೇಕಾಯಿತು. ಅದಕ್ಕಾಗಿ ಅವನು ದಿನಾ ಹೆದ್ದಾರಿಯಲ್ಲಿ ಪಟ್ಟಣದ ವರೆಗೆ ನಡೆಯುತ್ತಾ ಹೋಗಿ, ಏನಾದರೂ ಕೂಲಿ ನಾಲಿ ಮಾಡಿ ಹಣ ಸಂಪಾದಿಸಿ, ಆ ಹಣದಿಂದ ಮನೆಗೆ ಬೇಕಾದ ಜೀನಸುಗಳನ್ನು ತರುತ್ತಾ ಇರುವನು.

ಚಿಕ್ಕಂದಿನಿಂದಲೇ ಗೋವಿಂದನು ಮಿತವ್ಯಯವನ್ನು ಪಳಗಿಸಿಕೊಂಡವನು. ಅವನ ತಂದೆ, "ಕಂದಾ, ಪ್ರತಿ ಚಿಕ್ಕ ವಸ್ತುವಿನಿಂದಲೂ ಎಂದೋ ಒಂದು ದಿನ ಪ್ರಯೋಜನವಾಗುತ್ತದೆ. ಯಾವುದನ್ನೂ ಅಲಕ್ಷ್ಯ ಮಾಡಬಾರದು" ಎಂದು ಹೇಳುತ್ತಿದ್ದನು.

ಒಂದು ದಿನ ಅವನು ಹೆದ್ದಾರಿಯಲ್ಲಿ ನಡೆಯುತ್ತಾ ನಗರಕ್ಕೆ ಹೋಗುತ್ತಿರುವಾಗ, ದಾರಿಯಲ್ಲೊಂದು ತುಕ್ಕು ಹಿಡಿದು ಬಗ್ಗಿದ ಆಣಿ ಯಾರೋ ಬಿಸುಟಿದ್ದರು. ಗೋವಿಂದನು ಅದನ್ನು ಹೆಕ್ಕಿ ಚೀಲಕ್ಕೆ ಹಾಕಿಕೊಂಡನು.

ಆಗ ಇದಿರುಗಡೆಯಿಂದ ಮಂತ್ರಿಯ ಮಗನು ಕುದುರೆಯ ಮೇಲೇರಿಕೊಂಡು ಶರವೇಗದಿಂದ ಬರುತ್ತಿದ್ದನು. ಗೋವಿಂದನು ನೋಡುತ್ತಿದ್ದಂತೆ ಕುದುರೆಯ ಕಾಲಿನ ಲಾಳದ ಮೊಳೆಯೊಂದು ಜಾರಿ ದಾರಿಯಲ್ಲಿ ಬಿದ್ದು ಹೋಯಿತು.

"ಅಯ್ಯಾ ! ಲಾಳದ ಆಣಿ ಬಿದ್ದು ಹೋಗಿದೆ !" ಎಂದು ಗೋವಿಂದನು ಸ್ವರವೆತ್ತಿ ಕೂಗಿದನು.

ಆ ಕೂಗನ್ನು ಕೇಳಿ ಮಂತ್ರಿಯ ಮಗನು ಹಿಂದಿರುಗಿ ನೋಡಿ, ನಿರ್ಲಕ್ಷ್ಯವಾಗಿ ಕೈಯಾಡಿಸಿ ಮುಂದಕ್ಕೆ ಹೊರಟು ಹೋದನು.

ಒಂದು ಲಾಳದ ಮೊಳೆಗಾಗಿ ಹಿಂದಕ್ಕೆ ತಿರುಗುವುದು ತನ್ನ ಗೌರವಕ್ಕೆ ಕಡಿಮೆಯೆಂದು ಅವನಿಗೆ ತೋರಿತ್ತು. ಅಲ್ಲದೆ ಅರಣ್ಯದೊಳಗಿನ ಅಡ್ಡದಾರಿಯಿಂದ ಹೋಗುವವನಾಗಿದ್ದನು. ಅದು ಸಮೀಪದ ದಾರಿಯಾದುದರಿಂದ, ಒಂದು ಲಾಳದ ಮೊಳೆ ಜಾರಿದುದರಿಂದ ಕುದುರೆಗೇನೂ ಆಗದೆಂದುಕೊಂಡನು.

ಆದರೆ ಅವನ ನಂಬುಗೆ ತಪ್ಪಾಯಿತು. ಅವನು ಅರಣ್ಯ ದಾರಿಯಲ್ಲಿ ಸ್ವಲ್ಪ ದೂರ ಹೋಗುವಷ್ಟರಲ್ಲಿ



ಕುದುರೆಯ ಗೊರಸಿನ ಲಾಳವು ಸಡಿಲಾಗಿ ಜಾರಿತು. ಗೋವಿಂದನ ಕೈಯಿಂದ ಮೊಳೆಯನ್ನು ತೆಗೆದುಕೊಂಡಿದ್ದರೆ ಮಂತ್ರಿಯ ಮಗನು ಹೇಗೋ ಒಂದು ವಿಧವಾಗಿ ಲಾಳವನ್ನು ಮತ್ತೆ ಬಿಗಿಸಿ ಬಿಡುತ್ತಿದ್ದನು. ಈಗ ಲಾಳವಿಲ್ಲದ ಕುದುರೆ ನೋವಿನಿಂದ ಕುಂಟಲು ತೊಡಗಿತು. ಅವನು ಕುದುರೆಯಿಂದಿಳಿದು ಅದನ್ನು ಕಳೆದುಕೊಂಡು ನಡೆಯಬೇಕಾಗಿ ಬಂತು. ಹಾಗೆ ಅವನು ಅರಣ್ಯದಲ್ಲಿ ನಡೆಯುವಾಗ, ಕಳ್ಳರು ಅವನನ್ನು ಕಂಡು ಮುತ್ತಿ, ನಿಲುವು ಪೂರ್ತಿಯಾಗಿ ದೋಚಿಕೊಂಡು, ಅವನನ್ನು ಒಂದು ಮರಕ್ಕೆ ಕಟ್ಟಿ ಹಾಕಿ ಓಡಿ ಹೋದರು.

ಇಲ್ಲಿ ಗೋವಿಂದನು ಸ್ವಲ್ಪ ದೂರ ಹೋಗಲು, ದಾರಿಯಲ್ಲಿ ಒಂದು ಗಾಡಿ ಮಾಲಿಕೊಂಡು ನಿಂತಿರುವುದನ್ನು ನೋಡಿದನು. ಇರುಸಿನ ಆಣಿಯೊಂದು ಜಾರಿ ಹೋಗಿ ಗಾಡಿ ಹೊರಳಿತ್ತು. ಗಾಡಿಯಲ್ಲಿ ಕುಳಿತಿದ್ದ ಧನಿಕನು ಕೆಳಗಿಳಿದು ನಿಂತಿದ್ದನು. ಗಾಡಿಯವನು ಆಚೆಗೂ ಈಚೆಗೂ ಹುಡುಕುವಂತೆ ನೋಡುತ್ತಿದ್ದನು. ಧನಿಕನು ಗೋವಿಂದನನ್ನು ನೋಡಿದ ಕೂಡಲೇ "ಅಪ್ಪಾ, ನಿನ್ನ ಹತ್ತಿರ ಏನಾದರೂ ಆಣಿಯೋ, ಕೀಲೋ ಇದೆಯೋ? ನಾನು ಬೇಗನೇ ನಗರಕ್ಕೆ ಹೋಗಬೇಕಾಗಿದೆ. ನಡು ದಾರಿಯಲ್ಲಿ ಚಕ್ರದ ಕೀಲಾಣಿ ಜಾರಿ ಹೋಯಿತು. ಯಾವುದೋ ಒಂದು ಆಣಿ ಸಿಕ್ಕಿದರೆ ನಗರದ ವರೆಗೆ ಹೋಗಬಹುದೆನ್ನುತ್ತಾನೆ ಗಾಡಿಯವ. ಇಲ್ಲೆಲ್ಲೂ ಒಂದು ಕಬ್ಬಿಣದ ಕಸವೂ ಇಲ್ಲ." ಎಂದನು.

ಗೋವಿಂದನು ತನ್ನ ಹತ್ತಿರವಿದ್ದ, ತುಕ್ಕು ಹಿಡಿದ ಆಣಿಯನ್ನು ತೆಗೆದು ಕಲ್ಲಿನಿಂದ ಗುದ್ದಿ ಅದನ್ನು ಸರಿಮಾಡಿ ಚಕ್ರದ ಇರುಸಿಗೆ ಹಾಕಿದನು. ಧನಿಕನಿಗೆ ಬಹಳ ಸಂತೋಷವಾಯಿತು.

"ನೀನು ಕೂಡಾ ನಗರಕ್ಕೆ ತಾನೇ ಹೋಗುತ್ತೀ? ಗಾಡಿಯಲ್ಲಿ ಏರಿಕೋಪ್ಪಾ" ಎಂದು ಧನಿಕನು ಗೋವಿಂದನನ್ನೂ ಗಾಡಿಯಲ್ಲೇ ತನ್ನೊಂದಿಗೆ ನಗರಕ್ಕೆ ಕರೆದೊಯ್ದು, ಅವನ ಕೈಗೆ ಒಂದು ಚಿನ್ನದ ನಾಣ್ಯವನ್ನು ಕೊಟ್ಟನು.

ಆ ನಾಣ್ಯವನ್ನು ನೋಡಿದ ಕೂಡಲೇ ಗೋವಿಂದನ ಕಣ್ಣುಗಳು ಹೊಳಪುಗೊಂಡುವು. ಅದು ತನ್ನ ಕುಟುಂಬವನ್ನು ಎರಡು ತಿಂಗಳು ಪೋಷಿಸಲಿಕ್ಕೆ ಸಾಕೆನಿಸಿತು. ತನ್ನ ತಂದೆ ಎಂದೋ ಹೇಳುತ್ತಿದ್ದ ಮಾತು ಈಗ ಅಕ್ಷರಶಃ ನಿಜವಾಗಿದೆ! ಒಂದು ಚಿಕ್ಕ ತುಕ್ಕು ಹಿಡಿದ ಆಣಿ ಒಂದು ಚಿನ್ನದ ನಾಣ್ಯವನ್ನು ಸಂಪಾದಿಸಿಕೊಟ್ಟಿದೆ!

ಗೋವಿಂದನು ನಗರದಲ್ಲಿ ತನ್ನ ಕುಟುಂಬಕ್ಕೆ ಒಂದು ತಿಂಗಳಿಗೆ ಬೇಕಾದ ಸಾಮಾನುಗಳನ್ನು ಕೊಂಡು ಕೊಂಡು ಒಂದು ಗೋಣೀ ಚೀಲದಲ್ಲಿ ಕಟ್ಟಿ ಎತ್ತಿಕೊಂಡು, ಸಮೀಪದ ದಾರಿ ಎಂದುಕೊಂಡು ಅಡವಿದಾರಿಯನ್ನೇ ಹಿಡಿದು ಮನೆಗೆ ಮರಳುತ್ತಿದ್ದನು. ಸ್ವಲ್ಪ ದೂರ ಹೋಗಲು

ದಾರಿಯ ಪಕ್ಕದಲ್ಲಿದ್ದ ಮರಗಳಾಚೆಯಿಂದ ಏನೇನೋ ಆರ್ತನಾದಗಳು ಕೇಳತೊಡಗಿದುವು.

ಗೋವಿಂದನು ತನ್ನ ಗೋಣೀ ಚೀಲವನ್ನು ಗುರುತಿಸುವಂತೆ ಒಂದು ಪೊದರಿನ ನಡುವಿನಲ್ಲಿಟ್ಟು, ಆರ್ತನಾದ ಕೇಳುವಲ್ಲಿಗೆ ಹೋದನು. ದಾರಿಬಿಟ್ಟು ಸ್ವಲ್ಪ ದೂರದಲ್ಲಿ ಆರು ಮಂದಿ ಮಕ್ಕಳೊಂದಿಗೆ ಒಬ್ಬಳು ಸ್ತ್ರೀ ಕಾಣಿಸಿದಳು. ಅವರೆಲ್ಲಾ ಬಹಳ ದೀನ ಸ್ಥಿತಿಯಲ್ಲಿರುವಂತೆ ಆರ್ತನಾದಮಾಡುತ್ತಿದ್ದರು.

ಅವಳು ಒಬ್ಬ ಕೋಟೀಶ್ವರನ ಹೆಂಡತಿ. ಅವಳದೇ ಆ ಮಕ್ಕಳು ಕೂಡಾ.

"ಮೊನ್ನೆ ಸಾಯಂಕಾಲ ನಾವೆಲ್ಲಾ ಕೂಡಿ ವನದಲ್ಲಿ ವಿಹಾರಕ್ಕೆ ಹೊರಟೆವಪ್ಪಾ, ಈ ಮಕ್ಕಳು ಹೂಗಳನ್ನು ಕೊಯ್ಯುತ್ತಾ ಎಲ್ಲೆಲ್ಲೋ ಓಡಿದುವು. ಅವರೆಲ್ಲಿ ತಪ್ಪಿ ಹೋಗುವರೋ ಎಂಬ ಗಾಬರಿ ಯಲ್ಲಿ ನಾನೂ ಅವರ ಹಿಂದೆಲ್ಲಾ ಓಡಿದೆ. ಅಷ್ಟರಲ್ಲಿ ಕತ್ತಲಾಗ ಹತ್ತಿತು, ನಮಗೆ ದಾರಿ ದಿಕ್ಕು ಗೊತ್ತಾಗದೆ, ಎಲ್ಲಿಂದೆಲ್ಲಿಗೋ ಆಗಿ ಇಲ್ಲಿಗೆ ಬಂದೆವು. ರಾತ್ರಿ ಪೂರಾ ತಿಂಡಿ ತೀರ್ಥವಿಲ್ಲದೆ ತಿರಿಗಿ, ಇದು ಸ್ವಲ್ಪ ಭದ್ರದ ಜಾಗ ಅಂತ ಇಲ್ಲೇ ಇದ್ದೇವೆ. ನಿನ್ನೆ ಕೂಡಾ ತಿರುಗಿ, ದಾರಿ ಗೊತ್ತಾಗದೆ ಇಲ್ಲೇ ಬಂದು ಸೇರಿದೆವು. ಅನ್ನ ನೀರು ಸಿಗದೆ ತಿರುಗುವ ಶಕ್ತಿ ಕೂಡಾ ಹೋಯಿತು. ಇಲ್ಲಿದ್ದೇ ಕೂಗುತ್ತಾ ಇದ್ದೇವೆ, ನಮ್ಮ ಕೂಗು ಕೇಳುವ ನರಮನುಷ್ಯರೇ ಇಲ್ಲ. ಈ ದಿನ ದೇವರ ಹಾಗೆ ನೀನೊಬ್ಬ ಬಂದೆ!" ಎಂದು ಕೋಟೀಶ್ವರನ ಹೆಂಡತಿ ಹೇಳಿದಳು.

"ಇನ್ನು ನೀವೇನೂ ಹೆದರಬೇಕಾಗಿಲ್ಲ. ನಾನು ನಿಮಗೆ ದಾರಿ ತೋರಿಸುತ್ತೇನೆ. ಬನ್ನಿ ನನ್ನೊಂದಿಗೆ!" ಎಂದನು ಗೋವಿಂದ.

"ಅಪ್ಪಾ, ನಮಗೆ ಕಾಲೆತ್ತಲೂ ಶಕ್ತಿಯಿಲ್ಲ. ನಮಗೆ ಈಗ ಬೇಕಾದುದು ಒಂದಿಷ್ಟು ತಿಂಡಿ" ಎಂದಳವಳು.



"ಹಾಗಾದರೆ ಇರಿ, ಈಗ ಬಂದೆ!" ಎಂದು ಗೋವಿಂದನು ಓಡುತ್ತಾ ಹೋಗಿ, ತನ್ನ ಗೋಣೀ ಚೀಲವನ್ನು ಹೊತ್ತುಕೊಂಡು ಬಂದನು. ಅದರಲ್ಲಿ ತನ್ನ ಮಗಳಿಗಾಗಿ ತಂದಿದ್ದ ಮಿಠಾಯಿ ಮುಂತಾದ ಉಪಾಹಾರಗಳಿದ್ದುವು. ಅವುಗಳನ್ನು ಅವನು ಕೋಟೀಶ್ವರನ ಮಕ್ಕಳಿಗೆ ಕೊಟ್ಟು, ತನ್ನ ಹತ್ತಿರ ವಿದ್ದ ಪಾತ್ರಪದಾರ್ಥಗಳಿಂದ ಚಿಟುಕಿನ ಅಡಿಗೆಗೇ ಪ್ರಾರಂಭಿಸಿದನು. ಸಮೀಪವಿದ್ದ ಒಂದು ದೊಣೆ ಯಲ್ಲಿ ನೀರೂ ಇದ್ದಿತು. ಸ್ವಲ್ಪ ಹೊತ್ತಿಗೆ ಎಲ್ಲರೂ ಅವನು ಬೇಯಿಸಿ ಹಾಕಿದ್ದೇ ಅಮೃತಾನ್ನದಂತೆ ಉಂಡರು. ಹೋಗುವ ಪ್ರಾಣಗಳು ಹಿಂದಿರುಗಿದುವು. ಅವರನ್ನೆಲ್ಲ ಕರೆದುಕೊಂಡು ಗೋವಿಂದನು ದಾರಿಯ ವರೆಗೆ ಬಂದು, "ಹೀಗೆ ಹೋದರೆ ನಿಮ್ಮ ಮನೆ ಬರುತ್ತದಮ್ಮಾ, ನಿಶ್ಚಿಂತೆಯಿಂದ ಹೋಗಿ. ಯಾವ ಭಯವೂ ಇನ್ನಿಲ್ಲ. ನಾನು ನನ್ನ ದಾರಿ ಹಿಡಿಯುತ್ತೇನೆ" ಎಂದನು. "ಅಯ್ಯಯ್ಯೋ! ನಮ್ಮನ್ನು ಕ್ಷೇಮವಾಗಿ

ಮನೆಯವರೆಗೂ ಬಿಟ್ಟು ಬಿಡಪ್ಪಾ, ಪುಣ್ಯಾತ್ಮ!" ಎಂದಳು ಕೋಟೀಶ್ವರನ ಹೆಂಡತಿ. ಗೋವಿಂದನು ಅವರ ಜತೆಯಲ್ಲಿ ಅವರ ಮನೆಯವರೆಗೂ ಹೋದನು. ಅಲ್ಲಿಂದ ಅವನು ಹಿಂದಿರುಗುವಾಗ ಆ ಶ್ರೀಮಂತಳು ಅವನ ಕೈಗೆ ಪುಟ್ಟದೊಂದು ಚೀಲವನ್ನು ಕೊಟ್ಟಳು.

ಗೋವಿಂದನು ಅದನ್ನು ಬಿಡಿಸಿ ನೋಡಿದನು. ಅದರಲ್ಲಿ ಎಂಟು ಚಿನ್ನದ ನಾಣ್ಯಗಳಿದ್ದುವು. ಅದನ್ನು ನೋಡಿ ಅವನ ಕಣ್ಣುಗಳು ಇಷ್ಟಗಲವಾದುವು. ಬಿಸುಡಲ್ಪಟ್ಟ ಒಂದು ಆಣೆಗೆ ಇಷ್ಟೊಂದು ಮಹತ್ವವೆ! ಇದು ಸ್ವಪ್ನದಲ್ಲಿಯೂ ಅಂದು ಕೊಂಡಿಲ್ಲ. ಅವನು ಮತ್ತೆ ಕೆಲವು ಸಾಮಾನುಗಳನ್ನು ತೆಗೆದುಕೊಂಡು ಅಡವಿದಾರಿಯಲ್ಲೇ ಹೊರಟನು.

ಕಾಡಿನ ನಡುಭಾಗವನ್ನು ದಾಟಿ ಅವನು ಹೋಗುತ್ತಿರುವಾಗ ಸಮೀಪದಲ್ಲಿ ಯಾರೋ ನರಳುವ ಶಬ್ದವು ಕೇಳಿಸಿತು. ಅವನು ಆ ಶಬ್ದ ಬರುವ ಕಡೆಗೆ ಹೋಗಿ ನೋಡಿದನು. ಮರಕ್ಕೆ ಕಟ್ಟಿ ಹಾಕಲ್ಪಟ್ಟಿದ್ದ ಮಂತ್ರಿಯ ಮಗನೇ ಹಾಗೆ ನರಳುತ್ತಿದ್ದನು. ಕುದುರೆಯೂ ದೂರದಲ್ಲಿತ್ತು.

ಮಂತ್ರಿಯ ಮಗನು ಹೀನ ಸ್ವರದಿಂದ ತನಗೆ ನಡೆದ ದುರ್ಗತಿಯನ್ನು ಕುರಿತು ಗೋವಿಂದ ನೊಂದಿಗೆ ಹೇಳಿದನು. ಗೋವಿಂದನು ಅವನ ಕಟ್ಟುಗಳನ್ನು ಬಿಡಿಸಿ, ತಾನು ಹೆಕ್ಕಿಕೊಂಡಲಾಳದ ಆಣೆಯನ್ನು ಅವನ ಕುದುರೆಯ ಗೊರಸಿಗೆ ಹೊಡೆದು ಕೊಟ್ಟನು. ಹಾಗೆಯೇ ಮಂತ್ರಿಯ ಮಗನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, ಹಸಿದು ಕಂಗಲಾದ ಅವನಿಗೆ ಹೊಟ್ಟೆ ತುಂಬಾ ಒಳ್ಳೆಯ ಊಟವಮಾಡಿಸಿದನು.

"ಅಯ್ಯಾ, ನೀವು ಲಾಳದ ಮೊಳೆ ಕಳೆದುಕೊಂಡ ಕಾರಣದಿಂದ ಎಷ್ಟೊಂದು ಕಷ್ಟಕ್ಕೆ ಗುರಿಯಾದಿರೋ, ನನಗೆ ಅಂತಹಬಿಸುಡಲ್ಪಟ್ಟವಸ್ತುವಿನಿಂದ ಅಷ್ಟೊಂದು ಲಾಭವೇ ಆಯಿತು." ಎಂದು ಗೋವಿಂದನು ತನ್ನ ಕಥೆಯನ್ನೆಲ್ಲಾ ಮಂತ್ರಿಯ ಮಗನೊಂದಿಗೆ ಹೇಳಿದನು.

ಮಂತ್ರಿಯ ಮಗನು ಅವನನ್ನು ಬಹಳವಾಗಿ ಮೆಚ್ಚಿ, "ನೋಡು ಗೋವಿಂದಾ. ನನ್ನನ್ನು ನೋಡಿ ಕೊಳ್ಳಲಿಕ್ಕೆ ನಿನ್ನಂತಹ ಸರಿಯಾದವನೊಬ್ಬನು ನೌಕರನಾಗಿರಬೇಕು. ನನ್ನೊಂದಿಗೆ ನಗರಕ್ಕೆ ಬಂದು ಬಿಡೇನು ? ನಿನಗೆ ತಕ್ಕ ಸಂಬಳವನ್ನೂ ಮನೆಯನ್ನೂ ಏರ್ಪಡಿಸುತ್ತೇನೆ. ಆಗದೆನ್ನ ಬೇಡ" ಎಂದನು. ಅದನ್ನು ಕೇಳಿ ಗೋವಿಂದನ ಹೆಂಡತಿಗೂ ಸಂತೋಷವಾಯಿತು.

ಆ ದಿನವೇ ಗೋವಿಂದನು ತನ್ನ ಕುಟುಂಬವನ್ನು ಕರೆದುಕೊಂಡು ನಗರದಲ್ಲಿರುವ ಮಂತ್ರಿಯ ಮನೆಗೆ ಹೋಗಿ. ಅವರ ಆಶ್ರಯದಲ್ಲಿರುತ್ತ, ಒಳ್ಳೆಯ ರೀತಿಯಲ್ಲಿ ಮುಂದಕ್ಕೆ ಬಂದನು.





# ಆಶಾಪಾತಕ

ಕಾಶೀ ರಾಜ್ಯವನ್ನು ಪಾಲಿಸುವ ಬ್ರಹ್ಮದತ್ತ ಮಹಾರಾಜನಿಗೆ ಇಬ್ಬರು ಕುಮಾರರಿದ್ದರು. ರಾಜನು ತನ್ನ ಅವಸಾನ ಕಾಲವು ಸಮೀಪಿಸಿದ ಸಮಯದಲ್ಲಿ ದೊಡ್ಡವನಿಗೆ ರಾಜ್ಯವನ್ನು ಕೊಟ್ಟು, ಚಿಕ್ಕ ಮಗನನ್ನು ಸೇನಾಧಿಪತಿಯಾಗಿ ಮಾಡಿದನು. ತಂದೆ ತೀರಿಹೋದ ಮೇಲೆ ಜ್ಯೇಷ್ಠಕುಮಾರನ ಪಟ್ಟಾಭಿಷೇಕಕ್ಕೆ ಏರ್ಪಾಡು ನಡೆಯತೊಡಗಿತು. ತೀರಾ ಸಿಂಹಾಸನವೇರುವ ವೇಳೆ ಸಮೀಪಿಸಿದಾಗ ಅವನು, " ನನಗೆ ಈ ರಾಜ್ಯದಿಂದ ಏನೂ ಪ್ರಯೋಜನವಿಲ್ಲ; ಬೇಡ, ತಮ್ಮನೇ ರಾಜ್ಯವನ್ನಾಳಲಿ " ಎಂದು ವೈರಾಗ್ಯಭಾವದಲ್ಲಿ ಸಿಂಹಾಸನ ತ್ಯಾಗಮಾಡಿಬಿಟ್ಟನು.

ಅದರಿಂದ ತಮ್ಮನಿಗೆ ಪಟ್ಟಾಭಿಷೇಕವಾಯಿತು. ಅಣ್ಣನು ಕಾಶೀರಾಜ್ಯವನ್ನು ಬಿಟ್ಟು ಎಲ್ಲಿಯೋ ದೂರದಲ್ಲಿರುವ, ಕಾಶೀರಾಜ್ಯದ ಸಾಮಂತ ರಾಜ್ಯಕ್ಕೆ ಹೋದನು. ಅಲ್ಲಿ ಒಬ್ಬ ಧನಿಕನ ಮನೆಯಲ್ಲಿ ಏನೋ ಕೆಲಸಕ್ಕೆ ನಿಂತು, ಕಾಯಕಷ್ಟ ಮಾಡುತ್ತ ಕಾಲಕ್ಷೇಪ ಮಾಡುತ್ತಿದ್ದನು.

ಸ್ವಲ್ಪ ಕಾಲದ ಮೇಲೆ ಕಾಶೀರಾಜ್ಯದಿಂದ ಕೆಲವು ಅಧಿಕಾರಿಗಳು ಭೂಮಿಗಳನ್ನು ತನಿಖೆ ಮಾಡಿ ತೆರಿಗೆ ವಿಧಿಸುವ ಕೆಲಸ ಮಾಡುತ್ತ, ಈ ಸಾಮಂತ ರಾಜ್ಯಕ್ಕೂ ಬಂದರು. ಅವರು ಧನವಂತನ ಮನೆಯಲ್ಲಿರುವ ರಾಜಕುಮಾರನ ಗುರುತು ಹಿಡಿದು ಅವನ ಮೇಲೆ ಭಕ್ತಿ ಗೌರವಗಳನ್ನು ತೋರಿಸಿದರು. ಈ ಸಂಗತಿಯನ್ನು ತಿಳಿದ ಕೂಡಲೇ ಅಲ್ಲಿಯ ಧನವಂತನು ರಾಜಕುಮಾರನನ್ನು ನೋಡಿ, " ನೀನು ರಾಜಕುಮಾರನೆಂದು ಈ ವರೆಗೂ ತಿಳಿದಿರಲಿಲ್ಲ. ಹಾಗಾದರೆ ನನಗೊಂದು ಉಪಕಾರವಾಗಬೇಕು. ಕಾಶೀರಾಜನಾಗಿರುವ ನಿನ್ನ ತಮ್ಮನಿಗೆ ಪತ್ರ ಬರೆದು ನನ್ನ ತೆರಿಗೆಗಳು ತಗ್ಗುವ ಹಾಗೆ ಮಾಡಬೇಕು." ಎಂದು ಕೇಳಿಕೊಂಡನು. ರಾಜಕುಮಾರನು ಹಾಗೆಯೇ ಪತ್ರ ಬರೆದು ಕಳುಹಿಸಲು, ಕಾಶೀರಾಜನು ಒಪ್ಪಿ, ಆ ಧನಿಕನಿಗೆ ತೆರಿಗೆ ತಗ್ಗಿಸಿದನು.

ಈ ಸಂಗತಿ ತಿಳಿದ ಕೂಡಲೇ ಗ್ರಾಮದೊಳಗಿನ ಅನೇಕರು ಬಂದು ತಮಗೆ ಕೂಡಾ ತೆರಿಗೆಗಳು ತಗ್ಗುವ ಹಾಗೆ ಮಾಡಿಸಬೇಕೆಂದು ಕೇಳಿಕೊಂಡರು. ರಾಜಕುಮಾರನು ಅವರ ಒತ್ತಾಯಕ್ಕೆ ಮಣಿದು ಅವರೆಲ್ಲರಿಗೂ ತೆರಿಗೆ ತಗ್ಗಿಸಬೇಕೆಂಬ ವಿಜ್ಞಾಪನಾ ಪತ್ರವನ್ನು ತಮ್ಮನಿಗೆ ಬರೆದು ಕಳುಹಿಸಿದನು. ಎಲ್ಲರಿಗೂ



ಅವರವರ ಇಷ್ಟದಂತೆ ತರಿಗೆಗಳು ತಗ್ಗಿದುವು. ಅಂದಿನಿಂದ ಅವರೆಲ್ಲ ಕಾಶೀರಾಜನಿಗೆ ಕೊಡಬೇಕಾದ ತೆರಿಗೆಗಳಲ್ಲಿ ಒಂದು ಭಾಗವನ್ನು ರಾಜಕುಮಾರನಿಗೆ ಕಾಣಿಕೆಯಾಗಿ ತಂದು, ತೆಗೆದುಕೊಳ್ಳಬೇಕೆಂದು ನಿರ್ಬಂಧಿಸತೊಡಗಿದರು. ಜನರೆಲ್ಲಾ ಅವನನ್ನು ಮಹಾರಾಜನಂತೆಯೇ ಗೌರವಿಸತೊಡಗಿದರು. ಹೀಗಾದುದರಿಂದ ಆ ರಾಜಕುಮಾರನ ವೈರಾಗ್ಯ ಭಾವವು ಹೋಗಿ ಮತ್ತೆ ರಾಜ್ಯಾಕಾಂಕ್ಷೆ ಅಂಕುರಿಸ ತೊಡಗಿತು. ಆದರೆ ತಾನಾಗಿ ಬೇಡವೆಂದು ಬಿಟ್ಟ ರಾಜ್ಯವು ಈಗ ಹೇಗೆ ಬಂದೀತು ?

ಆದುದರಿಂದ ಅವನು ಒಂದೊಂದೇ ಸಾಮಂತ ರಾಜ್ಯವನ್ನು ವಶಪಡಿಸಿಕೊಳ್ಳುತ್ತ, ತಾನು ಹೀಗೆ ಮಾಡಿದೆನೆಂದು ತಮ್ಮನಿಗೂ ತಿಳಿಸುತ್ತ ಬಂದನು. ಕಾಶೀರಾಜನಾಗಿರುವ ತಮ್ಮನು, ಅಣ್ಣನು ಮಾಡುವ ಕೆಲಸವನ್ನು ಸ್ವಲ್ಪವೂ ಅಲ್ಲಗಳೆಯಲಿಲ್ಲ. ಹೀಗಾದುದರಿಂದ ಕಾಶೀರಾಜ್ಯವನ್ನೇ ವಶಪಡಿಸಿಕೊಳ್ಳಬೇಕೆಂದು ಅಣ್ಣನಿಗೆ ಆಶೆಯಾಯಿತು. ಅವನು ನಾಲ್ಕಾರು ಮಂದಿ ಹಿರಿಯರನ್ನು ನಿಯಮಿಸಿ ಅವರ ಮೂಲಕ, "ರಾಜ್ಯವನ್ನು ನನಗೆ ಒಪ್ಪಿಸುವೆಯಾ ? ಯುದ್ಧಕ್ಕೆ ತಯಾರಾಗುವೆಯಾ ?" ಎಂದು ತಮ್ಮನಿಗೆ ರಾಯಭಾರ ಕಳುಹಿಸಿದನು. "ಅಣ್ಣಾ, ನಾನು ನಿನ್ನೊಂದಿಗೆ ಯುದ್ಧ ಮಾಡಲಾರೆ. ನಿಜಕ್ಕೂ ಈ ರಾಜ್ಯವೆಲ್ಲಾ ನಿನ್ನದೇ. ಆದುದರಿಂದ ನೀನೇ ತೆಗೆದುಕೋ" ಎಂದು ತಮ್ಮನು ಪ್ರತ್ಯುತ್ತರ ಕಳುಹಿಸಿದನು.

ಆ ಕೂಡಲೇ ಅಣ್ಣನು ನಿರಾತಂಕದಿಂದ ಕಾಶೀ ರಾಜ್ಯದ ಸಿಂಹಾಸನದಲ್ಲಿ ಅಧಿಷ್ಠಿಸಿದನು. ತಮ್ಮನಿಗೆ ಸೇನಾಧಿಪತಿ ಪದವಿಯಾಯಿತು. ಇದು ತಾನೇ ಅವರ ತಂದೆಯ ಅಭಿಪ್ರಾಯ ?

ಹೀಗೆ ಹಿರಿಯಣ್ಣನು ರಾಜ್ಯವನ್ನು ಆಕ್ರಮಿಸಿಕೊಂಡರೂ ಅಷ್ಟರಿಂದ ತೃಪ್ತನಾಗಲಿಲ್ಲ, ದಿನದಿಂದ ದಿನಕ್ಕೆ ಅವನ ರಾಜ್ಯತೃಷ್ಣೆ ಹೆಚ್ಚುತ್ತಾಹೋಯಿತು. ಅಲ್ಲೀ ಇಲ್ಲೀ ದಂಡೆತ್ತುತ್ತ, ಒಂದರ ಮೇಲೊಂದು ರಾಜ್ಯವನ್ನು ಗೆದ್ದು ತನ್ನ ರಾಜ್ಯದೊಂದಿಗೆ ಸೇರಿಸುತ್ತಾ ಬಂದನು. ಎಷ್ಟು ರಾಜ್ಯಗಳನ್ನು ಜಯಿಸಿದರೂ ಅವನಿಗೆ ತೃಪ್ತಿಯಾಗಲಿಲ್ಲ.

ದೇವೇಂದ್ರನು ಭೂಲೋಕದ ವ್ಯವಹಾರಗಳನ್ನು ಕುರಿತು ಚರ್ಚಿಸುವಾಗ ಕಾಶೀರಾಜ್ಯದ ಸಂಗತಿ ಬಂದಿತು. ಇನ್ನು ಈ ವಿಷಯದಲ್ಲಿ ಉಪೇಕ್ಷೆಯಾಗಿದ್ದರೆ ಲೋಕಕ್ಕೇ ಅಪಾಯವಾಗುವುದೆಂದು ದೇವೇಂದ್ರನಿಗೆ ತೋರಿತು. ಆದುದರಿಂದ ಆ ಹಿರಿಯಣ್ಣನಿಗೆ ತಕ್ಕ ಬುದ್ಧಿ ಹೇಳಲೇ ಬೇಕೆಂದು ದೇವೇಂದ್ರನು ಹೊರಟನು.

ದೇವೇಂದ್ರನು ಒಬ್ಬ ಯುವಕನ ವೇಷದಲ್ಲಿ ರಾಜಸಭೆಗೆ ಪ್ರವೇಶಿಸಿ, ಒಂದು ಸಣ್ಣ ರಹಸ್ಯವನ್ನು ರಾಜನಿಗೆ ತಿಳಿಸಲಿರುವುದಾಗಿ ಹೇಳಿದನು.

ರಾಜನು ಆ ಯುವಕನನ್ನು ಏಕಾಂತಕ್ಕೆ ಕರೆದೊಯ್ದನು. ಆಗ ಯುವಕನು, "ರಾಜಾ, ನನ್ನ

ತಿಳುವಳಿಕೆಯಲ್ಲಿ ಮೂರು ಮಹಾ ನಗರಗಳಿವೆ. ಅವು ಸಮಸ್ತ ಸಿರಿಸಂಪತ್ತುಗಳಿಂದ, ರಥ, ಗಜ, ತುರಗ, ಪದಾತಿಗಳಿಂದ ತುಂಬಿ ತಳುಕುವ ನಗರಗಳು. ಅವುಗಳನ್ನು ನನ್ನ ಶಕ್ತಿಯಿಂದ ನಾನೇ ಜಯಿಸಿ ನಿನಗೆ ಸಮರ್ಪಿಸ ಬೇಕೆಂದಿದ್ದೇನೆ," ಎಂದು ಪ್ರೋತ್ಸಾಹ ಬರುವಂತೆ ಹೇಳಿದನು.

ಬಹಳ ಸಂತೋಷವೆಂದು ರಾಜನು ಒಪ್ಪಿದ ಕೂಡಲೇ ಯುವಕನು ಹೊರಟುಹೋದನು. ಆಶೆಯಿಂದ ಪರವಶನಾದ ರಾಜನು ಮತ್ತೆ ಎಷ್ಟು ಹುಡುಕಿಸಿದರೂ ಆ ಯುವಕನು ಸುತ್ತಮುತ್ತ ಎಲ್ಲಿಯೂ ಕಾಣಲಿಲ್ಲ.

ರಾಜನು ಕಳವಳ ಪಡುತ್ತ, ಮುಖ್ಯ ಮುಖ್ಯ ಉದ್ಯೋಗಸ್ಥರನ್ನು ಕರೆಯಿಸಿ, ಆ ಯುವಕನ ಚಹರೆಗಳನ್ನು ತಿಳಿಸಿ, ಅವನನ್ನು ಹುಡುಕಿ ಕಂಡು ಹಿಡಿಯುವಂತೆ ಕಳುಹಿಸಿದನು. ಹುಡುಕಲು ಹೋದ ಆ ಭಟರ ಹಿಂದೆ ಅವಸರ ಪಡಿಸುವಂತೆ ಬೇರೆ ಭಟರನ್ನೂ ಕಳುಹಿಸಿದನು.

ಯಾರು ಎಲ್ಲಿ ಎಷ್ಟು ಹುಡುಕಿದರೂ ಆ ಯುವಕನ ಜಾಡೇ ಕಾಣಲಿಲ್ಲ, ರಾಜನ ಬುದ್ಧಿ ಮಣ್ಣು ತಿನ್ನುವ ಹಾಗಾಯಿತು.

ಅದೇ ವಿಚಾರದಿಂದ ಮನೋವ್ಯಾಧಿ ಹಿಡಿದು ರಾಜನು ಹಾಸಿಗೆ ಸೇರಿದನು. ಯಾವ ಯಾವ ವೈದ್ಯರು ಏನೇನು ಮಾಡಿದರೂ ರಾಜನಿಗೆ ಗುಣವಾಗ ಲಿಲ್ಲ. ಅದೇ ಸಮಯಕ್ಕೆ ಸಮಸ್ತ ಶಾಸ್ತ್ರಗಳಲ್ಲಿಯೂ ಪ್ರವೀಣನಾದ ಬೋಧಿಸತ್ವನು ತಕ್ಷಶಿಲೆಯ ವ್ಯಾಸಂಗ ವನ್ನು ಮುಗಿಸಿ ಮನೆಗೆ ಬಂದನು. ರಾಜನ ಹೀನಸ್ಥಿತಿ ಯನ್ನು ಕೇಳಿ, ರಾಜನ ವ್ಯಾಧಿಯನ್ನು ತಾನು ಗುಣಪಡಿಸುವೆನೆಂದು ಸುದ್ದಿ ಕಳುಹಿಸಿದನು.

ಅರಮನೆಯಿಂದ ಬಂದ ಕರೆಯನ್ನನುಸರಿಸಿ ಬೋಧಿಸತ್ವನು ರಾಜನ ಬಳಿಗೆ ಹೋಗಿ, "ರಾಜಾ, ನಿನಗಾಗುವ ನೋವು ಎಂತಹುದು ?" ಎಂದು ವಿಚಾರಿಸಿದನು.

ರಾಜನು ಭಾವಾವೇಗದಲ್ಲಿ, ಆ ಯುವಕನು ಬಂದು ಹೇಳಿದ ಮೂರು ಮಹಾನಗರಗಳ ಸಂಗತಿಯನ್ನೂ,



ಅವನು ಮಾಡಿದ ವಾಗ್ದಾನವನ್ನೂ ವಿವರವಾಗಿ ಹೇಳಿದನು, “ಆಗಿನಿಂದಲೂ ನನಗೆ ಈ ರೋಗ ಬಂದಿದೆ. ಗುಣಪಡಿಸಲು ಸಾಧ್ಯವೇ ?” ಎಂದು ಕೇಳಿದನು ರಾಜ.

“ಸಾಧ್ಯವಿದೆ ಪ್ರಭೂ. ಅದನ್ನು ನೆನೆದು ಮನೋವೇದನೆಯಲ್ಲಿದ್ದರೆ ಅವನೇನು ಮಾಡುವನು ? ಜಯಿಸಿಕೊಡುವೆನೆಂದರೆ ನಿನ್ನ ಮುಖಂಡತೆಯೂ ಸಹಾಯವೂ ತನಗಿದ್ದೀತು ಎಂಬ ಅರ್ಥದಲ್ಲಿಯೇ ಹೇಳಿದ್ದಾನೆ !” ಎಂದನು ಬೋಧಿಸತ್ವ.

“ಹಾಗಾದರೆ ಈಗೇನು ಮಾಡಲಿ ?” ಎಂದನು ರಾಜ, “ಮೊದಲು ಚಿಂತಿಸುವುದನ್ನು ಬಿಡಬೇಕು. ನಿನ್ನ ಮನಸ್ಸಿನಲ್ಲಿದ್ದ ಆಶಾಭೂತವೇ ಆ ಯುವಕನ ರೂಪದಲ್ಲಿ ನಿನ್ನಲ್ಲಿ ಭ್ರಮೆ ಹುಟ್ಟಿಸಿರಬಹುದು. ಅದನ್ನು ಕುರಿತು ಚಿಂತಿಸಿ ಲಾಭವೇನಿಲ್ಲ. ಈ ಪ್ರಪಂಚದಲ್ಲಿರುವ ಪ್ರತಿ ವಸ್ತುವೂ ಸ್ವಲ್ಪ ಕಾಲದ ಮೇಲೆ ನಶಿಸಿ ಮಾಯವಾಗುವುದೆಂಬುದನ್ನು ಒಪ್ಪುವೆಯಾ ?” ಎಂದು ಬೋಧಿಸತ್ವನು ಕೇಳಲು, ಹೌದೆಂದನು ರಾಜ.

“ಪ್ರತಿ ಜೀವಿಯೂ ಪ್ರಾಣ ಹೋದ ಮೇಲೆ ದೇಹವನ್ನು ಕೂಡಾ ಇಲ್ಲೇ ಬಿಟ್ಟು ಹೋಗುತ್ತಾನಷ್ಟೆ ?” ಎಂದು ಮತ್ತೆ ಬೋಧಿಸತ್ವನು ಪ್ರಶ್ನಿಸಲು ಅದನ್ನೂ ರಾಜನು ಒಪ್ಪಿದನು.

“ಆದ್ದರಿಂದ ರಾಜಾ, ಮೂರಲ್ಲ ಮುನ್ನೂರು ದೇಶಗಳನ್ನು ಸಂಪಾದಿಸಿದರೂ ನೀನು ಹೆಚ್ಚಿನ ಸುಖಪಡುವುದೇನೂ ಇಲ್ಲ. ಯಾವುದೂ ಶಾಶ್ವತವಲ್ಲ. ಆಶೆಯೊಂದು ಪೆಡಂಭೂತ. ಅದರ ಗಣನೆಗೆ ಅಂತ್ಯವೇ ಇಲ್ಲ.

ಅಂತಹ ಆಶಾಪಾತಕಕ್ಕೆ ಮಾನವನು ಬಾಗಿಬಿಟ್ಟರೆ ಇನ್ನೂ ಇನ್ನೂ ಬೇಕೆನಿಸಿ ಈಗ ನಿನಗೆ ಬಂದ ಹಾಗೆ ಮನೋವ್ಯಾಧಿ ಹಿಡಿಯುತ್ತದೆ. ಇದರಿಂದ ತಪ್ಪಿಸಿಕೊಳ್ಳಬೇಕಾದರೆ ಆಶೆಯನ್ನು ಹದ್ದಿನಲ್ಲಿಟ್ಟುಕೊಳ್ಳಬೇಕು. ಕಾಲಿಗೆ ಸರಿಹೋಗುವಂತೆ ಚಪ್ಪಲಿಮಾಡುವ ಹಾಗೆ, ಜೀವಿತಕ್ಕೆ ಉಪಯೋಗ ಬೀಳುವಷ್ಟೇ ಆಶೆಯನ್ನಿಟ್ಟುಕೊಳ್ಳಬೇಕು. ಹದ್ದು ದಾಟಲು ಬಿಟ್ಟರೆ, ಆಜ್ಯಧಾರೆಯಿಂದ ಅಗ್ನಿಜ್ವಾಲೆ ಪ್ರಜ್ವಲಿಸುವಂತೆ, ಆಶೆಗಳು ವಿಜೃಂಭಿಸಿ ಅಪಾಯಕಾರಿಯಾಗುತ್ತದೆ” ಎಂದು ಮುಂತಾಗಿ ಬೋಧಿಸಲು, ರಾಜನಿಗೆ ಮನಃ ಶಾಂತಿಯುಂಟಾಗಿ ರೋಗ ಗುಣಮುಖವಾಯಿತು.

ರಾಜನ ಇಷ್ಟದಂತೆ ಬೋಧಿಸತ್ವನು ಮತ್ತೂ ಅನೇಕ ಧರ್ಮ ಬೋಧನೆಗಳನ್ನು ಮಾಡುತ್ತ ಜೀವಿತಾಂತದವರೆಗೂ ದೇಶಿಕನಾಗಿದ್ದು, ರಾಜ್ಯ ಪಾಲನೆಯಲ್ಲಿ ಅಗತ್ಯವಾದ ಆಲೋಚನೆ ರಾಜನಿಗೆ ಹೇಳುತ್ತಲೂ ಇದ್ದನು.





# ಭಕ್ತ ಕಬೀರ್

ವಾರಣಾಸಿಯ ಸಮೀಪದಲ್ಲಿರುವ ಒಂದು ಗ್ರಾಮದಲ್ಲಿ ನೀರೂ-ನೀಮಾ ಎಂಬ ಮುಸ್ಲಿಮ್ ದಂಪತಿಗಳಿದ್ದರು. ಒಂದು ದಿನ ಬೆಳಿಗ್ಗೆ ಒಂದು ಮರದ ಕೆಳಗೆ ಒಂದು ವರ್ಷವೂ ತುಂಬದಿದ್ದ ಮಗುವನ್ನು ನೀರೂ ನೋಡಿದನು. ಅವನು ಆ ಶಿಶುವನ್ನು ತಂದು ಹೆಂಡತಿಗೆ ಕೊಟ್ಟನು. ಸಂತಾನವಿಲ್ಲದ ಆ ಗಂಡ ಹೆಂಡಿರಿಗೆ ಆ ಮಗುವನ್ನು ನೋಡಿ ಬಹಳ ಸಂತೋಷವಾಯಿತು.

ಅವರು ಆ ಮಗುವಿಗೆ ಕಬೀರ್ ಎಂದು ಹೆಸರಿಟ್ಟು ಅತ್ಯಂತ ಕೊಂಡಾಟದಿಂದ ಬೆಳೆಸಿದರು. ಕಬೀರ್ ಬೆಳೆದು ದೊಡ್ಡವನಾಗಿ ಸಾಕು ತಂದೆಯ ನೇಯ್ಗೆಯ ವೃತ್ತಿಯನ್ನೇ ತಾನೂ ಕಲಿಯ ತೊಡಗಿದನು. ಮಗ್ಗದ ಮೇಲೆ ಕುಳಿತು ಬಟ್ಟೆ ನೇಯುತ್ತಾ ಅದರ ಲಯ ಶಬ್ದಕ್ಕೆ ಸರಿಯಾಗಿ ಮನಸ್ಸಿನಲ್ಲೇ ಹಾಡುತ್ತಾ ಇರುವನು.





ಆ ಸಮಯದಲ್ಲಿ ವಾರಣಾಸಿಯಲ್ಲಿ ಸುಪ್ರಸಿದ್ಧರಾಗಿ ರಾಮಾನಂದಸ್ವಾಮಿಯವರಿದ್ದರು. ಅವರ ಸದ್ವರ್ತನೆಗಳು ಕಬೀರನನ್ನು ಆಕರ್ಷಿಸಿದುವು. ಆದರೆ ತಂದೆತಾಯಿಗಳನ್ನು ಅರಿಯದಿರುವ ನಿರಕ್ಷರ ಕುಕ್ಷಿಯಾದ ತನ್ನನ್ನು, ರಾಮಾನಂದರು ಶಿಷ್ಯನಾಗಿ ಅಂಗೀಕರಿಸಿಕೊಳ್ಳಲಾರರೇನೋ ಎಂಬ ಅನುಮಾನವು ಕಬೀರನನ್ನು ಪೀಡಿಸ ತೊಡಗಿತು.



ಪ್ರತಿ ದಿನವೂ ಬೇಂಜಾವದಲ್ಲೇ ಎದ್ದು ಸ್ನಾನ ಮಾಡಿ ಬರುವುದು ರಾಮಾನಂದಸ್ವಾಮಿಯ ಪದ್ಧತಿ, ಹಾಗೆ ಒಂದು ದಿನ ಅವರು ಹೋದಾಗ ಕಬೀರ್ ಗಂಗಾನದಿಗಿಳಿಯುವ ಮೆಟ್ಟಿಲಿನ ಮೇಲೆ ಸಾಷ್ಟಾಂಗವಾಗಿ ಮಲಗಿದನು. ಸ್ನಾನ ಮುಗಿಸಿ ಮೇಲೆ ಬರುವ ರಾಮಾನಂದರ ಪಾದವು ಕಬೀರನ ಶರೀರದ ಮೇಲೆ ತಾಗಿದ ಕೂಡಲೇ, ಅವರ ಬಾಯಿಯಿಂದ ರಾಮ್ ರಾಮ್ ಎಂಬ ಸ್ಮರಣೆ ಹೊರಟಿತು.

ಕೂಡಲೇ ಕಬೀರ್ ಎದ್ದುನಿಂತು ಕೈ ಮುಗಿದು, "ಸ್ವಾಮೀ! ಈ ಪ್ರಭಾತದ ಶುಭ ಸಮಯದಲ್ಲಿ ಪವಿತ್ರ ಗಂಗಾಸ್ನಾನಮಾಡಿ ಬರುತ್ತ, ನೀವು ನನಗೆ ದಿವ್ಯನಾಮವನ್ನು ಉಪದೇಶ ಮಾಡಿದಿರಿ" ಎಂದನು. "ಯಾರು ನೀನು ?" ಎಂದು ರಾಮಾನಂದರು ಕೇಳಿದರು. "ನನ್ನ ಹೆಸರು ಕಬೀರ್. ನಿಮ್ಮ ಶಿಷ್ಯ. ಇಷ್ಟೇ ಹೇಳಬಲ್ಲೆನು" ಎಂದನು ಕಬೀರ್ ವಿನಯದಿಂದ.





ಮತ್ತೆ, ಬಲುಬೇಗದಲ್ಲೇ ಕಬೀರನು ಹಾಡಿದ ಭಕ್ತಿಗೀತೆಗಳು, ಪ್ರಜೆಗಳಲ್ಲಿ, ಪ್ರಿಯವಾಗಿ ಹರಡಿದುವು. ದೇವರ ದಯೆಗೆ ಬೇಕಾದುದು ಹೊರಗಿನ ಆಚಾರಗಳಲ್ಲವೆಂದೂ, ನಿರ್ಮಲವಾದ ಭಕ್ತಿ ಮಾತ್ರವೆಂದೂ ಆತನ ಗೀತೆಗಳಲ್ಲಿರುವ ಬೋಧನೆಗಳು. ಅವನು ಜಾತಿಭೇದಗಳನ್ನು ನಿರಸನ ಮಾಡಿದನು. ಹಿಂದೂ ಮುಸಲ್ಮಾನರಲ್ಲಿರುವ ಮನ ಬಂದಂತೆ ಪ್ರವರ್ತಿಸುವ ಭಾವಗಳನ್ನು ಪರಿಹಾಸ ಮಾಡಿದನು.

ಕಬೀರನನ್ನು ಅವಮಾನ ಪಡಿಸಬೇಕೆಂದು ಕೆಲವು ದುಷ್ಟರು, ಅವನು ಔತಣಕ್ಕೆ ಬರಲು ಹೇಳಿದ್ದಾನೆಂದು, ನೂರಾರು ಜನರಿಗೆ ಹೇಳಿದರು. ಈ ವಿಷಯವೇನೂ ತಿಳಿಯದುದರಿಂದ ಆ ದಿನ ಕಬೀರನು ಮನೆಯಲ್ಲೇ ಇರಲಿಲ್ಲ. ಕಡೆಗೆ ಅವನು ಮನೆಗೆ ಬಂದಾಗ, ಯಾವನೋ ತನ್ನ ಹಾಗಿದ್ದವನು ಬಂದವರಿಗೆಲ್ಲಾ ಔತಣದ ಊಟ ಮಾಡಿಸಿ ತೃಪ್ತಿಪಡಿಸಿ ಕಳುಹಿಸಿದನೆಂದು ತಿಳಿದು ಆಶ್ಚರ್ಯಪಟ್ಟನು.





ಸಂಪ್ರದಾಯ ವಾದಿಗಳು ಕೆಲವರು ಢಿಲ್ಲೀ ಸುಲ್ತಾನನ ಬಳಿಗೆ ಹೋಗಿ, ತಮ್ಮ ಮತ ವಿಶ್ವಾಸಗಳನ್ನು ಕಬೀರನು ಅವಮಾನ ಪಡಿಸುವನೆಂದು ಫಿರ್ಯಾದಿ ಮಾಡಿದರು. ಸುಲ್ತಾನನು ವಿಚಾರಣೆ ನಡೆಸಿದಾಗ ಕಬೀರ್, "ನಾನು ಹಿಂದೂವೂ ಅಲ್ಲ, ಮುಸ್ಲಿಮ್‌ನೂ ಅಲ್ಲ. ಹಿಂದೂ ಮುಸ್ಲಿಮ್ ಭೇದ ನೋಡದಿರುವ ದೇವರ ಭಕ್ತ, ಅಷ್ಟೇ" ಎಂದನು.

ಅವನ ನಿರ್ಭೀತಿಯ ಉತ್ತರದಿಂದ ಬರತಕ್ಕ ಅಪಾಯವನ್ನು ವಿವರಿಸಿ ಒಬ್ಬ ಉದ್ಯೋಗಸ್ಥನು ಕಬೀರನನ್ನು ಹೆದರಿಸಲು ನೋಡಿದನು. ಆಗ ಕಬೀರ್, "ಆನೆಯ ಮೇಲೆ ಹೋಗುವವನು ನಾಯಿಯ ಬೊಗಳುವಿಕೆಗೆ ಹೆದರುವನೇ ?" ಎಂದನು, ಸಭಿಕರು ಭಯಾಶ್ಚರ್ಯಗಳಿಂದಿರಲು, ಸುಲ್ತಾನ್ ಅವನ ಧೈರ್ಯಕ್ಕೆ ಮೆಚ್ಚಿ ಗೌರವದಿಂದ ಕಳುಹಿಸಿ ಕೊಟ್ಟನು.





ಗೋರಕ್‌ಪೂರ್ ಎಂಬ ಗ್ರಾಮದಲ್ಲಿ ಕಬೀರನು ಕಾಲಧರ್ಮ ಹೊಂದಿದನು. ಆತನ ಭೌತಿಕ ಕಾಯವನ್ನು ದಹನ ಮಾಡಬೇಕೆಂದು ಹಿಂದೂ ಶಿಷ್ಯರೂ, ಭೂಸ್ಥಾಪಿತ ಮಾಡಬೇಕೆಂದು ಮುಸ್ಲಿಮ್ ಅನುಚರರೂ ತಗಾದೆಗಿಳಿದರೆಂದು ಪ್ರತೀತಿಯೊಂದಿದೆ.

ಆದರೆ ಕಬೀರನ ಭೌತಿಕ ಕಾಯದ ಮೇಲೆ ಮುಚ್ಚಲ್ಪಟ್ಟ ಬಿಳೀ ಬಟ್ಟೆಯನ್ನು ತೆಗೆದ ಕೂಡಲೇ, ಅಲ್ಲಿ ಅವನ ಶರೀರಕ್ಕೆ ಬದಲು ತಾವರೆ ಹೂಗಳು ಕಾಣಿಸಿದುವಂತೆ ! ಅವುಗಳಲ್ಲಿ ಕೆಲವು ಪುಷ್ಪಗಳನ್ನು ಹಿಂದೂ ಶಿಷ್ಯರು ಕಾಶಿಗೆ ತೆಗೆದುಕೊಂಡು ಹೋಗಿ, ಅವುಗಳ ಮೇಲೆ ಸ್ಮಾರಕ ಮಂದಿರವನ್ನು ನಿರ್ಮಿಸಿದರು. ಉಳಿದ ಪುಷ್ಪಗಳನ್ನು ಮುಸ್ಲಿಮ್ ಅನುಚರರು ಭೂಸ್ಥಾಪಿತ ಮಾಡಿ, ಅದರ ಮೇಲೆ ಗೋರಿಯೊಂದು ಕಟ್ಟಿದರು.





ಹದಿನಾಲ್ಕನೆಯ ಶತಾಬ್ದಾಂತದಿಂದ ಹದಿನೈದನೆಯ ಶತಾಬ್ದಾರಂಭದವರೆಗೆ ಜೀವಿಸಿದ್ದ ಕಬೀರನ ಗೀತೆಗಳೂ, ಆಲೋಚನೆಗಳೂ ಅನಂತರದ ತಲೆ ಮಾರಿನವರನ್ನು ತುಂಬಾ ಪ್ರಭಾವಿತಗೊಳಿಸಿದುವು. ಮುಖ್ಯವಾಗಿ ಗುರುನಾನಕ್, ಮೀರಾಬಾಯಿ, ರಾಮದಾಸ ಮೊದಲಾದವರನ್ನು ಕಬೀರನ ಗೀತೆಗಳು ಹೆಚ್ಚಾಗಿ ಆಕರ್ಷಿಸಿವೆ.



# ಸಮದೃಷ್ಟಿ

**ಮಂ**ಗಳಾಪುರವೆಂಬ ಊರಿನಲ್ಲಿ ಒಬ್ಬರು ಜಮೀನುದಾರರಿದ್ದರು. ಅವರು ತುಂಬಾ ಒಳ್ಳೆಯವರೆಂದು ಎಲ್ಲರಿಂದಲೂ ಹೊಗಳಿಸಿಕೊಳ್ಳುತ್ತಿದ್ದರು. ಅವರಿಗೆ ತಿರುಪತಿರಾಯನೆಂಬ ಒಬ್ಬ ತಮ್ಮನಿದ್ದನು. ಅವನದು ಪೋಲಿಗುಣ. ಇದಿ ರಾಳಿಗಳ ಲೋಪಗಳನ್ನು ಹುಡುಕಿ ಹಿಡಿದು ಎತ್ತಿತೋರಿಸುವುದು ಅವನಿಗೆ ವಿನೋದ ಕಾಲಕ್ಷೇಪ.

ಮಂಗಳಾಪುರದಲ್ಲಿ ಪ್ರತಿವರ್ಷವೂ ನಡೆಯುವ ಚೈತ್ರಪೌರ್ಣಮಿ ಉತ್ಸವಕ್ಕೆ, ಪರಮಾನಂದಸ್ವಾಮಿ ಎಂಬ ಸಾಧುಗಳೊಬ್ಬರು ಆಗಮಿಸುತ್ತಿದ್ದರು. ಪೌರರು ಅವರಿಗೆ ಜೋಡೆತ್ತುಗಳನ್ನು ಹೂಡಿದ ರಥವನ್ನು ಅಲಂಕರಿಸಿ ಸ್ವಾಗತ ಹೇಳಿ ಮೆರೆವಣಿಗೆಯಲ್ಲಿ ಕರೆದುಕೊಂಡು ಬರುತ್ತಿದ್ದರು.

ಈ ಸಾರಿ ಕೂಡಾ ಪರಮಾನಂದ ಸ್ವಾಮಿಗಳು ಮಂದಹಾಸದಿಂದ ರಥದ ಮೇಲೇರಿ ಕುಳಿತರು. ಜನರ ಮಧ್ಯದಲ್ಲಿದ್ದು ಇದನ್ನೆಲ್ಲ ನೋಡುತ್ತಿದ್ದ ತಿರುಪತಿರಾಯನು ಮುಂದೆ ಬಂದು, " ಸರ್ವಸಂಗ ಪರಿತ್ಯಾಗಿಗಳಾದವರು ರಥದಮೇಲೆ ಮೆರವಣಿಗೆ ಹೋಗುವುದು ಯಾವ ನ್ಯಾಯ !" ಎಂದು ಅವಹೇಳನೆ ಮಾಡಿದನು.

ಅದನ್ನು ಕೇಳಿ ಜನರು ಕೋಪಗೊಳ್ಳುವುದನ್ನು ನೋಡಿ, ಪರಮಾನಂದ ಸ್ವಾಮಿ ಬಹಳ ಶಾಂತ ರೀತಿಯಿಂದ, " ಯಾರೂ ಅವನನ್ನು ದೂರಬಾರದು. ಶಾಂತರಾಗಿರಿ " ಎಂದು ಸಮಾಧಾನಪಡಿಸಿ, ತಿರುಪತಿರಾಯನನ್ನು ನೋಡಿ, " ನೀನು ಹೇಳಿದುದರಲ್ಲಿ ಸ್ವಲ್ಪ ಮಟ್ಟಿಗೆ ನಿಜವಿದೆ. ಅದರ ವಿಷಯ ಆಮೇಲೆ ಹೇಳುತ್ತೇನೆ. ಮೊದಲು ನೀನು ಕೂಡಾ ರಥದ ಮೇಲೆ ನನ್ನ ಪಕ್ಕದಲ್ಲಿ ಕುಳಿತುಕೋ " ಎಂದರು.

ಅದನ್ನು ಕೇಳಿ ತಿರುಪತಿರಾಯನು ದೊಡ್ಡ ವಿಜಯ ಸಂಪಾದಿಸಿದಂತೆ ಉಬ್ಬುತ್ತ ರಥದ ಮೇಲೆ ಏರಿ ಕುಳಿತುಕೊಂಡನು. ರಥವು ಒಂದು ದೊಡ್ಡ ಭವನದ ಮುಂದೆ ಹೋಗಿನಿಂತಿತು.

ತಿರುಪತಿರಾಯನು ರಥದಿಂದ ಇಳಿಯುತ್ತ, "ಇದು ಇನ್ನೂ ಚೆನ್ನಾಗಿದೆ. ಜಗತ್ತೇ ಮಾಯವೆಂದು ಬೋಧಿಸುವ ಸ್ವಾಮಿಗಳು ವಾಸಮಾಡಲಿಕ್ಕೆ ಅಲಂಕಾರ ಭವನಗಳು ಬೇಕೇನು?" ಎಂದನು.

ಪರಮಾನಂದಸ್ವಾಮಿ ಕಿರುನಗೆ ನಗುತ್ತ, " ಈ ಉತ್ಸವದ ಮೂರು ದಿನಗಳು ಮುಗಿಯುವ ವರೆಗೆ ನೀನು ನನ್ನೊಂದಿಗೆ ಇದ್ದು ಬಿಟ್ಟರೆ, ನಿನ್ನ ಸಂದೇಹ

ಗೌರೀಪುತ್ರ



ಗಳನ್ನೆಲ್ಲಾ ತೀರಿಸಿಬಿಡುತ್ತೇನೆ" ಎಂದರು. "ಅದು ಹೇಗೆಂದು ನೋಡುತ್ತೇನೆ" ಎಂದು ತಿರುಪತಿರಾಯನು ಒಪ್ಪಿದನು. ಪರಮಾನಂದಸ್ವಾಮಿ ಭವನದೊಳಗೆ ಪ್ರವೇಶಿಸಿದ ಕೂಡಲೇ ಬಟ್ಟೆಗಳ ವ್ಯಾಪಾರಿಯೊಬ್ಬನು ಬೆಳ್ಳಿಯ ಹರಿವಾಣದಲ್ಲಿ ಫಲ ಪುಷ್ಪಗಳೊಂದಿಗೆ ಪಟ್ಟೆಯವಸ್ತ್ರವನ್ನು ತಂದು ಅವರ ಪಾದಗಳ ಮುಂದೆ ಇಟ್ಟು "ಸ್ವೀಕರಿಸಬೇಕು" ಎಂದು ಕೈಮುಗಿದು.

ಪರಮಾನಂದಸ್ವಾಮಿ ಆ ವ್ಯಾಪಾರಿಯೊಂದಿಗೆ, "ಬಹಳ ಸಂತೋಷ. ನಿನ್ನ ಇಷ್ಟ ಪ್ರಕಾರವೇ ತೆಗೆದುಕೊಳ್ಳುತ್ತೇನೆ. ಇಂತಹುದೇ ಇನ್ನೊಂದು ವಸ್ತ್ರವನ್ನು ತಂದು ಈ ತಿರುಪತಿ ರಾಯನಿಗೆ ಕೂಡ ಕೊಡಬಲ್ಲೆಯಾ?" ಎಂದರು. ಅವನೂ ಓಡಿ ಹೋಗಿ ಹಾಗೆಯೇ ತಂದುಕೊಟ್ಟನು.

ಪರಮಾನಂದಸ್ವಾಮಿ ಅಲ್ಲಿ ಸೇರಿದ ಊರ ಹಿರಿಯರೊಂದಿಗೆ "ನಾನು ಇಲ್ಲಿ ಇರುವಷ್ಟು ಕಾಲ ಈ ತಿರುಪತಿರಾಯನು ಕೂಡಾ ನನ್ನೊಂದಿಗೇ ಇರುತ್ತಾನೆ. ನನಗೆ ಮಾಡುವ ಎಲ್ಲಾ ಮರ್ಯಾದೆ ಗಳನ್ನೂ ಇವನಿಗೂ ಮಾಡಬೇಕು" ಎಂದರು.

ಆ ಕ್ಷಣದಿಂದ ಪರಮಾನಂದಸ್ವಾಮಿಗೆ ನಡೆಯುವ ಉಪಚಾರಗಳು ತಿರುಪತಿರಾಯನಿಗೂ ನಡೆದುವು. ಅವರು ಅನುಭವಿಸುವುದನ್ನೆಲ್ಲಾ ತಿರುಪತಿರಾಯನೂ ಅನುಭವಿಸಿದನು.

ಮೂರನೇ ದಿನ ರಾತ್ರಿ ಪರಮಾನಂದ ಸ್ವಾಮಿ ತಿರುಪತಿರಾಯನೊಂದಿಗೆ, "ಯಾವ ಊರಿನಲ್ಲಿಯೂ ನಾನು ಮೂರು ದಿನಗಳಿಗಿಂತ ಹೆಚ್ಚಿಗೆ ಇರಲಾರೆನು. ನಾಳೆ ಬೆಳಗ್ಗೆ ನಾನು ಮತ್ತೊಂದು ಊರಿಗೆ ಹೋಗುತ್ತೇನೆ. ನನ್ನೊಂದಿಗೆ ನೀನು ಬಂದರೆ ಒಳ್ಳೆಯದೇ. ಬರುವೆಯಾ?" ಎಂದರು.

ತಿರುಪತಿರಾಯನು ಹಾಗೆಯೇ ಬರುವೆನೆಂದನು. ಮರುದಿನ ಬೆಳಿಗ್ಗೆ ಜನರು ಪರಮಾನಂದ ಸ್ವಾಮಿ ಯನ್ನೂ, ತಿರುಪತಿರಾಯನನ್ನೂ ರಥದ ಮೇಲೆ ಕೂಡಿಸಿ ಮೆರವಣಿಗೆಯಲ್ಲಿ ಊರ ಹೊರಗಿನವರೆಗೆ ಕರೆದೊಯ್ದು ಬೀಳುಗೊಂಡರು.

ಪರಮಾನಂದಸ್ವಾಮಿ ರಥದಿಂದ ಇಳಿದು ಊರವರನ್ನು ಆಶೀರ್ವದಿಸಿ ಎಲ್ಲರೂ ಹಿಂದಿರುಗಿ ಹೋಗುವುದನ್ನು ನೋಡುತ್ತ ಸ್ವಲ್ಪ ಹೊತ್ತು ನಿಂತರು. ಆಮೇಲೆ ತಿರುಪತಿರಾಯನೊಂದಿಗೆ, "ಇನ್ನು ನಾವು ಹೊರಡೋಣ, ಈ ಕಾಲುದಾರಿಯನ್ನು ಹಿಡಿದು ನಡೆದರೆ ಕತ್ತಲಾಗುವುದರೊಳಗೆ ಇನ್ನೊಂದು ಊರನ್ನು ಸೇರುತ್ತೇವೆ" ಎಂದರು.

ಇಬ್ಬರೂ ಕಾಲು ದಾರಿ ಹಿಡಿದು ನಡೆಯ ತೊಡಗಿದರು. ಹೋಗು ಹೋಗುತ್ತ ದಾರಿಯಲ್ಲಿ ಕಲ್ಲುಗಳು ಹೆಚ್ಚಾಗುತ್ತ, ಏರು ತಗ್ಗುಗಳು ಬರುತ್ತ ನಡೆಯಲು ಕಷ್ಟವಾಗಿ ತೋರಿತು. ಪರಮಾನಂದ ಸ್ವಾಮಿ ಒಂದೇ ಸಮನೆ ನಡೆಯುತ್ತಿದ್ದರು. ತಿರುಪತಿ ರಾಯನು ತುಂಬಾ ದಣಿದನು. ಹೊಟ್ಟೆಯಲ್ಲಿ



ಹಸಿವೆ ಬೇರೆ ಪೀಡಿಸ ತೊಡಗಿತು. ತಲೆಯ ಮೇಲೆ ಬಿಸಿಲಿನ ಕಾವು. ಇದಾವುದರ ಪರಿವೆಯೂ ಇಲ್ಲದೆ ಸ್ವಾಮಿಗಳು ನಡೆಯುತ್ತಲೇ ಇದ್ದರು.

ತಿರುಪತಿರಾಯನು ಇನ್ನು ನಡೆಯಲಾಗದೆ, ಪರಮಾನಂದಸ್ವಾಮಿಯೊಂದಿಗೆ, "ಅಯ್ಯಾ, ಬಾಯಿ ಒಣಗಿಹೋಯಿತು. ಕೆಟ್ಟ ಬಾಯಾರಿಕೆ! ನಿಮಗೇನೂ ಆಗಿಲ್ಲವೆ?" ಎಂದನು ಸಂಕಟ ಪಡುತ್ತ.

"ನೀನು ಹೇಳಿದಾಗ ನನಗೂ ಬಾಯಾರಿಕೆಯ ನೆನಪು ಬಂತು. ಆಕೋ, ಅಲ್ಲೊಂದು ಮಡು ಇರುವ ಹಾಗಿದೆ. ಬಾ ಹೋಗೋಣ!" ಎಂದರು.

"ಅದರ ನೀರೇ? ಕುಡಿಯುವಂಥಾದ್ದೇನಾ? ನಿನ್ನೆಯ ವರೆಗೆ ಬಾಯಾರಿಕೆಗೆ ಹಣ್ಣಿನ ರಸ ಕುಡಿಯುತ್ತಿದ್ದಿರಿ? ಮೃಗಗಳು ಕುಡಿಯುವ ನೀರು ಇದು" ಎಂದನು ಅಸಹ್ಯತೆಯಿಂದ.

"ಹಸಿವೆಯ ಬೆಂಕಿಗೆ ಎಲ್ಲವೂ ಆಗುತ್ತದೆ. ನಮ್ಮ ದಾಹವೂ ಮೃಗಗಳ ಹಾಗೇನೇ! ಮೊದಲು ನೀರು ಕುಡಿ! ಇಲ್ಲಿ ನಮಗೆ ಹಣ್ಣಿನ ರಸ ಹಿಂಡಿಕೊಡುವವರು ಯಾರೂ ಇಲ್ಲವಷ್ಟೆ?" ಎಂದು ಪರಮಾನಂದ ಸ್ವಾಮಿ ನೀರ ಮಡುವಿಗಿಳಿದು ನಾಲ್ಕು ಬೊಗಸೆ ನೀರು ಕುಡಿದರು. ತಿರುಪತಿರಾಯನೂ ಉಪಾಯವಿಲ್ಲದೆ ಆ ನೀರನ್ನು ಕುಡಿದನು. "ಇನ್ನು ನನಗೆ ನಡೆಯುವ ಶಕ್ತಿ ಇಲ್ಲ!" ಎಂದು ಉಸಿರುಬಿಟ್ಟನು.

ಪರಮಾನಂದರು ನಗುತ್ತ, "ನನಗೂ ಅಷ್ಟೇ, ಸ್ವಲ್ಪ ಆಯಾಸ ಪರಿಹರಿಸಿಕೊಂಡರೆ ಸರಿಯಾಗುತ್ತದೆ" ಎಂದು ಅವನ ಬದಿಯಲ್ಲೇ ಕುಳಿತರು.

ಒಂದು ಗಂಟೆ ಹಾಗೆ ಕುಳಿತಿರುವಾಗ, ಒಂದು ಒಂಟೆತ್ತಿನ ಗಾಡಿ ಆ ದಾರಿಯಾಗಿ ಬಂದಿತು. ಗಾಡಿ ಹೊಡೆಯುವ ಬೈರಪ್ಪ ಪರಮಾನಂದ ಸ್ವಾಮಿಯನ್ನು ನೋಡಿ, ಗಾಡಿಯಿಂದ ಇಳಿದು ಬಂದು ನಮಸ್ಕಾರ ಮಾಡಿ, "ಸ್ವಾಮಿ, ಗಾಡಿಯಲ್ಲಿ ಏರಿಕೊಳ್ಳುವಿರಾ? ಮುಂದಿನ ಊರಿಗೆ ತಾನೇ?" ಎಂದನು.

ಇಬ್ಬರೂ ಗಾಡಿಯಲ್ಲಿ ಏರಿಕೊಂಡರು. ಅವರು ಬೈರಪ್ಪನ ಗ್ರಾಮವನ್ನು ಸೇರುವ ಹೊತ್ತಿಗೆ ಚೆನ್ನಾಗಿ ರಾತ್ರಿಯಾಯಿತು.

ಬೈರಪ್ಪನು ಗಾಡಿಯನ್ನು ಒಂದು ಚಾವಡಿಯ ಮುಂದೆ ನಿಲ್ಲಿಸಿ, "ಸ್ವಾಮಿ, ಈ ರಾತ್ರಿ ತಾವು ಇಲ್ಲೇ ಕಳೆಯ ಬೇಕಾಗುತ್ತೆ. ನನ್ನದು ಸಣ್ಣ ಗುಡಿಸಲು ಮನೆ. ಇಲ್ಲೇ ನಿಮಗೆ ಸೌಕರ್ಯವಾಗಿರುತ್ತದೆ, ನಾನು ಹೋಗಿ ಏನಾದರೂ ತರುತ್ತೇನೆ" ಎಂದನು.

ಪರಮಾನಂದಸ್ವಾಮಿಯೂ, ತಿರುಪತಿರಾಯನೂ ಆ ಚಾವಡಿಯನ್ನು ಏರಿಕೊಂಡರು. "ಇದು ಯಾವುದೋ ಪಂಚಾಯತೀ ಚಾವಡಿಯಂತಿದೆ. ರಾತ್ರಿ ಮಲಗಲಿಕ್ಕೇನೂ ಅಡ್ಡಿಯಿಲ್ಲ" ಎಂದರು ಪರಮಾನಂದಸ್ವಾಮಿ.

ತಿರುಪತಿರಾಯನು ಬೇಸರದಿಂದ "ನಿದ್ದೆಯ ಮಾತು ಹೇಗೋ ಏನೋ ಆಗುತ್ತನ್ನಿ. ಮೊದಲು ಹಸಿವೆ ತೀರಬೇಡವೇನು?" ಎಂದನು.

"ಇಲ್ಲೆಲ್ಲಾದರೂ ಹುಡುಕಿದರೆ ನೀರು ಸಿಗಬಹುದು" ಎಂದರು ಪರಮಾನಂದಸ್ವಾಮಿ.

ಅಷ್ಟರಲ್ಲಿ ಬೈರಪ್ಪನು ಎರಡು ಚಿಕ್ಕ ಮಣ್ಣಿನ ಮೊಗೆಗಳಲ್ಲಿ ಉಪ್ಪು ಗಂಜಿ ತೆಗೆದುಕೊಂಡು ಬಂದು ಅವರ ಮುಂದಿಟ್ಟು, "ಈ ಹೊತ್ತಿನಲ್ಲಿ ನನ್ನ ಮನೆಯಲ್ಲಿ ಮತ್ತೇನಿರಲಿಲ್ಲ" ಎಂದನು.

"ನಿನಗೂ ಇಟ್ಟುಕೊಂಡಿದ್ದಿ ತಾನೇ ?" ಎಂದು ಪರಮಾನಂದ ಸ್ವಾಮಿ ಒಂದು ಮೊಗೆಯನ್ನೆತ್ತಿ ಕುಡಿಯುತ್ತ, ಇನ್ನೊಂದನ್ನು ತಿರುಪತಿರಾಯನಿಗೆ ಕೊಟ್ಟರು. ತಿರುಪತಿರಾಯನು ಅದನ್ನು ಕುಡಿಯುತ್ತ ವಾಂತಿಮಾಡುವಂತೆ ಮುಖಸಿಂಡರಿಸಿ, "ಇದರಲ್ಲಿ ಉಪ್ಪೇ ಇಲ್ಲಾಂತ ಕಾಣುತ್ತೆ" ಎಂದನು.

ಖಾಲಿ ಮೊಗೆಗಳನ್ನು ತೆಗೆದುಕೊಂಡು ಹೊರಡಲಿರುವಬೈರಪ್ಪನನ್ನು ಸ್ವಾಮಿಗಳುತಡೆದು"ಇಕೋಪ್ಪ, ಈ ಹೊತ್ತಿನಲ್ಲಿ ನಮಗಿಷ್ಟು ಗಂಜಿ ಹೊಯ್ದು ನಮ್ಮ ಜೀವ ಉಳಿಸಿದೆಯಪ್ಪ? ನಿನ್ನ ಉಪಕಾರ ಮರೆಯುವಂಥಾದ್ದಲ್ಲ. ಈ ವಸ್ತ್ರದ ಹೊರತು ಮತ್ತೇನಿಲ್ಲ. ತೆಗೆದುಕೋ" ಎಂದು, ಅವನು ಬೇಡೆಂದರೂ ಕೇಳದೆ ಪಟ್ಟೆವಸ್ತ್ರವನ್ನು ಕೊಟ್ಟೇಬಿಟ್ಟರು.

ತಿರುಪತಿರಾಯನು ಆಶ್ಚರ್ಯದಿಂದ, "ಇದೇನ್ರೀ ಹುಚ್ಚು ! ಉಪ್ಪು ಕೂಡಾ ಸರಿಯಾಗಿಲ್ಲದ ಗಂಜಿ ನೀರಿಗೆ ಪಟ್ಟೆ ವಸ್ತ್ರದ ಬಹುಮಾನವೇ ! ಇಷ್ಟೊಂದು ಬೆಲೆ ತಿಳಿಯದ ನೀವು ಅಸಲು ಅದನ್ನೇಕೆ ತೆಗೆದುಕೊಂಡಿರಿ ? ಅದನ್ನು ಕೊಟ್ಟವರಿಗೂ ಬುದ್ಧಿ ಇಲ್ಲ!" ಎಂದನು.

ಪರಮಾನಂದಸ್ವಾಮಿ ನಗುತ್ತ, "ಮಂಗಳಾಪುರದ ಜನರು ಹಬ್ಬದ ಸಡಗರದಲ್ಲಿ ಪ್ರೀತಿಯಿಂದ ಗೌರವಿಸಿದರು; ಕಾಣಿಕೆಕೊಟ್ಟರು. ಅದು ಅವರವರ ಶಕ್ತಿಗೆ ತಕ್ಕದ್ದು. ಅಂತಲೇ ತೆಗೆದುಕೊಂಡೆನು. ಇಲ್ಲದಿದ್ದರೆ ಅವರು ನೊಂದುಕೊಳ್ಳುತ್ತಾರೆ. ಅಲ್ಲದೆ ಕಾವಿ ಬಟ್ಟೆಯಲ್ಲಿ ತಿರುಗುವ ನನಗೇಕೆ ಹೇಳು ಪಟ್ಟೆ ಬಟ್ಟೆ ? ಅದೀಗ ನಮ್ಮ ಪ್ರಾಣ ಉಳಿಸಿತು. ಬಡ ಬೈರಪ್ಪನಿಗೆ ಉಪಕಾರವೂ ಆಯಿತು. ತಿರುಪತಿರಾಯಾ ! ಮನುಷ್ಯರು ಏನನ್ನೇ ಆದರೂ ಸಮದೃಷ್ಟಿಯಿಂದ ನೋಡಬೇಕು. ಅಭಿಮಾನಿಗಳು ಪ್ರೇಮದಿಂದ ಕೊಡುವ ಔತಣವಾದರೂ, ಗಂಜಿಯಾದರೂ ನನಗೆ ಒಂದೇ. ಸುಖಗಳಿಗೆ ಉಬ್ಬದೆ, ಕಷ್ಟಗಳಿಗೆ ತಗ್ಗದೆ ನನ್ನ ಕೈಲಾದಷ್ಟು ಇತರರಿಗೆ ಸಹಾಯಮಾಡಲು ಪ್ರಯತ್ನಪಡುತ್ತೇನೆ. ಜನರಿಗೆ ಒಳಿತನ್ನು ಬೋಧಿಸುತ್ತೇನೆ" ಎಂದರು.

ತಿರುಪತಿರಾಯನು ಅವರ ಪಾದಗಳನ್ನು ಮುಟ್ಟಿ, "ನಿಮ್ಮ ದೊಡ್ಡತನವನ್ನು ತಿಳಿದುಕೊಳ್ಳದೆ ಅಜ್ಞಾನದಿಂದ ಅವಹೇಳನೆ ಮಾಡಿದೆನು. ಕ್ಷಮಿಸಬೇಕು, ಮಹಾಸ್ವಾಮಿ !" ಎಂದನು.



# ಎಲ್ಲರೂ ವೀರರೇ

**ಕುಂ**ತಳ ದೇಶದ ಯುವಕನಾದ ಅಜಯನಿಗೆ, ಕರ್ಪೂರ ದೇಶದ ರಾಜಧಾನಿಯಾದ ಇಂದುಪುರದಲ್ಲಿ ವಿನಯನೆಂಬೊಬ್ಬ ಮಿತ್ರನಿದ್ದನು.

ಒಂದು ದಿನ ಅಜಯನು ತನ್ನದೇ ಆದ ಒಂದು ಕುದುರೆಯನ್ನೇರಿ ಮಿತ್ರನನ್ನು ನೋಡಬೇಕೆಂದು ದೂರದಲ್ಲಿರುವ ಇಂದುಪುರಕ್ಕೆ ಹೋದನು.

ವಿನಯನು ತನ್ನ ಮಿತ್ರನನ್ನು ಸಕಲ ಮರ್ಯಾದೆಗಳಿಂದ ಆದರಿಸಿ, ಸಾಯಂಕಾಲದಲ್ಲಿ ರಾಜಧಾನಿಯ ವಿಚಿತ್ರ ವಿಶೇಷಗಳನ್ನು ನೋಡಲು ತನ್ನ ಕುದುರೆಯ ಮೇಲೆ ಅಜಯನೊಂದಿಗೆ ಹೊರಟನು. ಸ್ವಲ್ಪ ದೂರ ಹೋದ ಮೇಲೆ ವಿನಯನ ಕುದುರೆ ಹಿಂದೆ ಬಿತ್ತು.

ಮುಂದೆ ಹೋಗುತ್ತಿದ್ದ ಅಜಯನು ಹಿಂದಿರುಗಿ ನೋಡಿ, "ನಮ್ಮ ಕುಂತಳ ದೇಶದ ಕುದುರೆಗಳು ಎಂತಹ ಉತ್ತಮ ಜಾತಿಯೆಂದು ನೋಡಿದೆಯಾ ? ಎಷ್ಟು ವೇಗವಾಗಿ ಓಡುತ್ತಿದೆ ? ನಿನ್ನ ಕುದುರೆಯನ್ನು ಹೇಗೆ ಹಿಂದೆ ಹಾಕಿತು !" ಎಂದನು.

ವಿನಯನು ಮುಗುಳು ನಗುತ್ತ, "ನಮಗೆ ಉತ್ತಮ ಜಾತಿ ಕುದುರೆ ಮುಖ್ಯವಲ್ಲ. ಯುದ್ಧರಂಗ ರಂಗದಲ್ಲಿ ಶತ್ರುವನ್ನು ಇದಿರಿಸಿ ಹೋರಾಡುವಾಗ ಬೆನ್ನುಕೊಟ್ಟು ಓಡುವ ಶತ್ರುವನ್ನು ನಾವೆಂದಿಗೂ ಬೆಂಬತ್ತಲಾರೆವು. ನಮ್ಮ ದೇಶದವರೆಲ್ಲಾ ವೀರರೇ !" ಎಂದನು.

ಮಿತ್ರನ ಉತ್ತರವನ್ನು ಕೇಳಿ ಅಜಯನು ಮತ್ತೇನೂ ಹೇಳಲಿಲ್ಲ.





# ಕಿಶೋರದಲಿಂತ್ಯ

ಹಿಂದೆ ಗೋಪಪಾಳ್ಯವೆಂಬ ಗ್ರಾಮದಲ್ಲಿ ನೀಲಕಂಠನೆಂಬ ಒಬ್ಬರೈತನಿದ್ದನು. ಅವನಿಗೆ ಎರಡು ಎಕರೆ ಬೆಟ್ಟುಗದ್ದೆಗಳಷ್ಟೇ ಇದ್ದುವು. ಅವಂತಿ ಅವನಿಗಿರುವ ಒಬ್ಬಳೇ ಮಗಳು. ಮಗುವಾಗಿರುವಾಗಲೇ ತಾಯಿಯನ್ನು ಕಳೆದುಕೊಂಡ ಅವಂತಿಯನ್ನು ತಂದೆ ನೀಲಕಂಠನು ಅಕ್ಕರೆಯಿಂದ ಪೋಷಿಸುತ್ತಿದ್ದನು.

ಈಗ ಅವಂತಿಗೆ ಮದುವೆಯ ವಯಸ್ಸು ಬಂದಿತು. ಹತ್ತು, ಹದಿನೈದುಸಾವಿರ ವರದಕ್ಷಿಣೆ ಸುರಿಯದೆ ವರನು ಕುದುರುವ ಲಕ್ಷಣ ಕಾಣಲಿಲ್ಲ. ಒಂದುದಿನ ನೀಲಕಂಠನು ಎಲ್ಲಿಯಾದರೂ ಸಾಲದೊರಕುವುದೇನೋ ನೋಡಲು, ಹಿಂದಿರುಗುವಾಗ ಒಂದೆರಡು ದಿನ ಆಗುವುದೆಂದು ಮಗಳಿಗೆ ಹೇಳಿ, ನೆರೆಯ ಊರಿನಲ್ಲಿರುವ ದೂರದ ಬಂಧುಗಳ ಮನೆಗೆ ಹೋದನು. ಅವಂತಿ ಕೂಡಾ ಮನೆಯಲ್ಲಿ ಬೇಸರವಾದುದರಿಂದ ಮನೆಗೆ ಬೀಗಹಾಕಿ ಪಕ್ಕದ ಗ್ರಾಮದಲ್ಲಿದ್ದ ತನ್ನ ಸ್ನೇಹಿತೆಯ ಮನೆಗೆ ಹೋದಳು.

ಮರುದಿನ ಕತ್ತಲೆಯಾಗುವ ಹೊತ್ತಿನಲ್ಲಿ ಅವಂತಿ ಒಂದು ಬಾಡಿಗೆಯ ಗಾಡಿಯಲ್ಲಿ ತನ್ನ ಮನೆಗೆ ಹಿಂದಿರುಗಿದಳು. ಅವಳು ಮನೆಯ ಬಾಗಿಲಿನ ಹತ್ತಿರ ಬರುವಾಗ, ಒಳಗೆ ತನ್ನ ತಂದೆ ಯಾರೊಂದಿಗೋ ತಗಾದೆ ಮಾಡುತ್ತ, ಕೋಪದಿಂದ ಬೈದಾಡುವಂತೆ ಕೇಳಿತು. ಸ್ವಲ್ಪ ಹೊತ್ತು ಹಾಗೇ ನಿಂತಳು.

"ಏನಯ್ಯಾ ಇದು ? ವಯಸ್ಸಿನಲ್ಲಿ ದೊಡ್ಡವರೆಂದು ಇಷ್ಟರವರೆಗೆ ಮರ್ಯಾದೆ ಕೊಟ್ಟು ಮಾತಾಡಿದೆ. ಕಡೇಸಾರಿ ಹೇಳುತ್ತೇನೆ. ಒಳ್ಳೆಯ ಬುದ್ಧಿ ತಂದುಕೊಂಡು ನಾಳೆ ಬೆಳಿಗ್ಗೆ ನನ್ನ ಹಣ ಕೊಟ್ಟುಬಿಡಬೇಕು. ಇಲ್ಲದಿದ್ದರೆ ಕೋತ್ವಾಲ ಕಚೇರಿಗೆ ಹೋಗಿ ನಿಮ್ಮ ಮೇಲೆ ಫಿರ್ಯಾದಿ ಮಾಡುವುದು ಖಂಡಿತ" ಎಂದು ಹೇಳಿ, ಬಾಗಿಲು ತೆರೆದು ಇಪ್ಪತ್ತೈದು ವರ್ಷದ ಯುವಕನೊಬ್ಬನು ಹೊರಗೆ ಬಂದು ಅತ್ತಿತ್ತ ನೋಡದೆ ಬೀದಿಗಿಳಿದು ಹೊರಟುಹೋದನು.

ಅವಂತಿ ಮನೆಯೊಳಗೆ ಹೋಗಿ "ಏನು ಗಲಾಟೆ ಅಪ್ಪಾ ?" ಎಂದು ಕೇಳಿದಳು.

ಇನ್ನೂ ಕೋಪದ ಕಾವಿನಲ್ಲಿದ್ದ ನೀಲಕಂಠನು, "ಅದೆಲ್ಲಾ ನಿನಗೆ ಹೇಳಬೇಕೇನು ? ನಿನ್ನ ಕೆಲಸ ನೋಡಿಕೋ, ನಡಿ" ಎಂದು ಅಧಟಿದನು.

ಈವರೆಗೆ ತನ್ನ ಮೇಲೆ ಕಠಿಣಮಾತು ಪ್ರಯೋಗಿಸದಿದ್ದ ತಂದೆ ಹೀಗೆ ಹೊಡೆಯುವ ಮಾತು

ಎಂ. ಕೆ. ಈಶ್ವರರಾವ್

ಹೇಳಿದುದನ್ನು ಕೇಳಿ, ಅವಂತಿಯ ಕಣ್ಣುಗಳು ನೆನೆದುವು. ರಾತ್ರಿ ಊಟ, ಕೆಲಸಗಳೆಲ್ಲ ಮೌನವಾಗಿ ಕಳೆದ ಮೇಲೆ ನೀಲಕಂಠನು ಶಾಂತನಾಗಿ ಮಗಳ ಹತ್ತಿರಬಂದು, "ನೋಡು ಶಾಂತಾ, ನಿನ್ನ ಮದುವೆ ಬರುವ ತಿಂಗಳಲ್ಲೇ ನಡೆಯುತ್ತದೆ. ಎಲ್ಲಾ ವಿಧದಲ್ಲಿಯೂ ಕೂಡಿಬಂದಿದೆ. ಹತ್ತುಸಾವಿರ ವರದಕ್ಷಿಣೆ ಎಂದು ವಾರದ ಹಿಂದೆ ಇಬ್ಬರು ಹೇಳಿ ಹೋದರಷ್ಟೇ? ಅದರಲ್ಲೊಂದನ್ನೇ ನಿಶ್ಚಯಿಸಿದ್ದೇನೆ" ಎಂದನು.

"ಅಷ್ಟು ಹಣ ಎಲ್ಲಿ ಸಿಕ್ಕಿತು ಅಪ್ಪಾ ?" ಎಂದು ಅವಂತಿ ಹೆದರುತ್ತಾ ಕೇಳಿದಳು.

"ಆ ವಿಚಾರವೆಲ್ಲಾ ನಿನಗೇಕೆ. ಸುಮ್ಮನಿರು" ಎಂದು ನೀಲಕಂಠನು ಮಂಚದ ಹಾಸಿಗೆ ಬಿಡಿಸಿ ಮಲಗಿದನು.

ಅವಂತಿ ಎಲ್ಲಾ ಕೆಲಸಗಳನ್ನು ಮುಗಿಸಿ ಬರುವಾಗ ನೀಲಕಂಠನು ಗಾಢನಿದ್ರೆಯಲ್ಲಿ ಗೊರಿಕೆ ಹೊಡೆಯುತ್ತಿದ್ದನು. ಅವಳು ಸದ್ದು ಮಾಡದೆ ತಂದೆಯ ಬಟ್ಟೆಯ ಪೆಟ್ಟಿಗೆಯನ್ನು ತೆರೆದು ನೋಡಿದಳು. ಪೆಟ್ಟಿಗೆಯ ಅಡಿ ಭಾಗದಲ್ಲಿ ಒಂದು ತೊಗಲಿನ ಚೀಲ ಕಾಣಿಸಿತು. ಅದರೊಳಗೆ ತುಂಬಾ ಹಣವಿದ್ದಿತು. ತಂದೆ ತನ್ನ ಮದುವೆಗಾಗಿ ಕಡೆಗೆ ಏನೋ ಕಳ್ಳತನವೋ ಮೋಸವೋ ಮಾಡಿ ಈ ಹಣ ತಂದಿಟ್ಟಿದ್ದಾರೆಂದು ಅಂದುಕೊಂಡು ಬಹಳ ಖೇದಗೊಂಡಳು. ಆ ಚರ್ಮದ ಚೀಲವನ್ನು ತನ್ನ ತಲೆದಿಂಬಿನ ಕೆಳಗೆ ಇಟ್ಟುಕೊಂಡು ಚಿಂತಿಸುತ್ತಾ ನಿದ್ದೆ ಮಾಡಿದಳು.

ಬೆಳಗಾಗಿ ಸ್ವಲ್ಪ ಹೊತ್ತಾದ ಮೇಲೆ ಮುಂಚಿನ ದಿನ ನೀಲಕಂಠನೊಂದಿಗೆ ಜಗಳಾಡಿ ಹೋದ ಯುವಕನು ಅಲ್ಲಿಗೆ ಬಂದನು. ನೀಲಕಂಠನು ಅವನನ್ನು ನೋಡಿದ ಕೂಡಲೇ, "ಪುನಃ ಏಕೆ ಬಂದೆ ? ನಿನ್ನೆಯೇ ಸಾರಿಹೇಳಿದ್ದೇನೆ. ನಿನ್ನ ಹಣದ ಸಂಗತಿ ನನಗೆ ಗೊತ್ತೇ ಇಲ್ಲ. ನೀನು ನೂರುಸಾರಿ ಬಂದರೂ ಇಷ್ಟೇ ನನ್ನ ಉತ್ತರ. ಹೋಗಿಬಿಡು" ಎಂದನು.



ಯುವಕನು ಕೋಪದಿಂದ ಏನೋ ಹೇಳಲಿರುವಾಗ, ಅವಂತಿ ಮುಂದೆ ಬಂದು ಅವನನ್ನು ನೋಡಿ "ಏನೋ ಹಣದ ಸಂಗತಿ ಕುರಿತು ಅಪ್ಪನನ್ನೇಕೆ ಬಾಧಿಸುವಿರಿ ? ಇದೆಂತಹ ಮರ್ಯಾದೆ ?" ಎಂದಳು.

"ಇದರಲ್ಲಿ ಬಾಧಿಸುವಂಥಾದ್ದು ಏನೂ ಇಲ್ಲ. ನಡೆದ ಸಂಗತಿ ಹೇಳುತ್ತೇನೆ, ಕೇಳಿ ನೀನಾದರೂ ಇವರಿಗೆ ಸ್ವಲ್ಪ ಹೇಳು" ಎಂದು ಯುವಕನು ಮುಂದೆ ಹೇಳಿದ ಸಮಾಚಾರವೇನೆಂದರೆ :

ಆ ಯುವಕನ ಹೆಸರು ಬಾಲಚಂದ್ರ. ಅವನು ಒಂದು ಸರಾಫ ಅಂಗಡಿಯಲ್ಲಿ ಲೆಕ್ಕಬರೆಯುವ ಗಣಕನಾಗಿದ್ದನು. ಒಂದುದಿನ ಯಜಮಾನನು ಹತ್ತು ಸಾವಿರ ರೂಪಾಯಿಯನ್ನು ಒಂದುತೊಗಲಿನ ಚೀಲದಲ್ಲಿಟ್ಟುಕೊಂಡು ವ್ಯಾಪಾರದ ಕೆಲಸದ ಮೇಲೆ ಎಲ್ಲಿಗೋ ಹೋಗಿ, ಒಂದು ಗಂಟೆ ಕಳೆದು ವಿಚಾರದ ಮುಖದಿಂದ ಹಿಂದಿರುಗಿ ಬಂದನು. ದಾರಿಯಲ್ಲಿ ಹಣ ತುಂಬಿದ ತೊಗಲಿನ ಚೀಲವನ್ನು ಯಾರೋ ಲಪಟಾ



ಯಿಸಿಕೊಂಡರಂತೆ. ಇದನ್ನು ಕೇಳಿ ಯಜಮಾನನಿಗಿಂತಲೂ ಬಾಲಚಂದ್ರನಿಗೇ ಹೆಚ್ಚಿಗೆ ಚಿಂತೆಯಾಯಿತು.

ಬಾಲಚಂದ್ರನ ಅಣ್ಣನೊಬ್ಬ ಪಟ್ಟಣದಲ್ಲಿದ್ದನು. ಅವನಿಗೆ ಆರೋಗ್ಯ ಕೆಟ್ಟಿದೆ ಎಂದು ತಿಳಿದು ಎಲ್ಲಾ ಕೆಲಸ ಮುಗಿಸಿ ಸುಮಾರು ಅರ್ಧ ರಾತ್ರಿಯಲ್ಲೇ ಅವನು ಪಟ್ಟಣಕ್ಕೆ ಹೊರಟನು. ದಾರಿಯಲ್ಲಿ ಒಂದು ತೋಪು ಬಂದಿತು. ತೋಪಿನ ನಡುವೆ ಒಂದು ಕೆರೆಯಿದ್ದಿತು. ಬಾಲಚಂದ್ರನು ತೋಪಿನ ದಾರಿಯಲ್ಲಿ ನಡೆಯುತ್ತಿದ್ದಾಗ, ಒಂದು ಮರದ ಹಿಂದಿನಿಂದ ಯಾರೋ ಮಾತಾಡಿಕೊಳ್ಳುವ ಶಬ್ದ ಕೇಳಿತು.ಸ್ವಲ್ಪವೂ ಸದ್ದುಮಾಡದೆ ಆ ಮಾತಿಗೆ ಕಿವಿಗೊಟ್ಟನು.

"ನೋಡಪ್ಪಾ, ಈ ತೊಗಲ ಚೀಲದಲ್ಲಿರುವ ಹಣವನ್ನೆಲ್ಲ ನಮ್ಮಲ್ಲಿ ಯಾರೋ ಒಬ್ಬರು ತೆಗೆದುಕೊಂಡರೆ ಕಡೇಪಕ್ಷ ಒಂದು ವರ್ಷದ ವರೆಗೆ ಕಳ್ಳತನದ ಗೊಡವೆ ಬಿಟ್ಟು ಒಳ್ಳೆಯ ರೀತಿಯಲ್ಲಿರಬಹುದು. ಅದಕ್ಕಾಗಿ ಒಂದು ಕೆಲಸಮಾಡುವ. ನಾವು ಇದನ್ನು ಆ ಕೆರೆಯ ದಂಡೆಯಲ್ಲಿಟ್ಟು ದೂರ ಹೋಗಿ ಆ ಪೊದರಿನ ಹತ್ತಿರ ನಿಲ್ಲುವಾ. ಅಲ್ಲಿಂದ ಇಬ್ಬರೂ ಒಟ್ಟಿಗೆ ಓಡಿ ಬರುವಾ. ಯಾರು ಮೊದಲು ಆ ಹಣದ ಚೀಲ ಮುಟ್ಟುವರೋ ಅದರಲ್ಲಿರುವುದಷ್ಟೂ ಅವರಿಗೆ ! ಏನನ್ನುತ್ತೀ ?" ಎಂದನು ಒಬ್ಬ ಇನ್ನೊಬ್ಬನೊಂದಿಗೆ,

ಎರಡನೆಯವನು ಸರಿಯೆಂದು ಒಪ್ಪಿದ. ಇಬ್ಬರೂ ಆ ಚೀಲವನ್ನು ಕೆರೆಯ ದಂಡೆಯಲ್ಲಿಟ್ಟು ದೂರದಲ್ಲಿದ್ದ ಪೊದರಿನ ಕಡೆಗೆ ಹೋದರು. ಮರದ ಮರೆಯಲ್ಲಿ ಅದನ್ನೆಲ್ಲ ಗಮನಿಸಿಕೊಂಡಿದ್ದ ಬಾಲಚಂದ್ರನು ಬಿರಬಿರನೆ ಆ ಚೀಲದ ಹತ್ತಿರಬಂದು ನೋಡಿ ಬೆರಗಾದನು. ಆ ತೊಗಲಿನ ಚೀಲ ಅವನ ಯಜಮಾನನದೇ !

ಬಾಲಚಂದ್ರನು ತಟಕ್ಕನೆ ಅದನ್ನು ಎತ್ತಿಕೊಂಡ ಓಟಕಿತ್ತನು. ದೂರದಿಂದ ಅದನ್ನು ನೋಡಿ ಇಬ್ಬರು ಕಳ್ಳರೂ ಅವನ ಬೆಂಬತ್ತಿ ಓಡಿಸಿಕೊಂಡು ಬಂದರು.

ಬಾಲಚಂದ್ರನು ಬಹಳ ದೂರದವರೆಗೆ ಓಡಿ, ನೀಲಕಂಠನಿರುವ ಗ್ರಾಮದವರೆಗೆ ಬಂದನು. ಬೀದಿಯಲ್ಲಿ ಜನಸಂಚಾರವೇನಿರಲಿಲ್ಲ. ತಾನು ಕಳ್ಳರ ಕೈಗೆ ಸಿಕ್ಕಿ ಬಿದ್ದರೂ, ಹಣದ ಚೀಲ ಕಳ್ಳರಿಗೆ ಸಿಗಬಾರದೆಂಬ ಆಲೋಚನೆಯಿಂದ ಅವನು ಬೀದಿಯ ಬದಿಯಲ್ಲಿದ್ದ ಒಂದು ಮನೆಯ ಜಗಲಿಗೆ ಕಟ್ಟಿದ ತಡಿಕೆಯ ಹಿಂಬದಿಗೆ ಅದನ್ನು ಬೀಸಿ ಒಗೆದನು.

ಹಾಗೆಯೇ ಅವನು ಓಡುತ್ತಾ ಗ್ರಾಮವನ್ನು ದಾಟಿ ಮತ್ತಿಷ್ಟು ದೂರ ಹೋದಾಗ ಬೆಳಗಾಗುತ್ತಾ ಬಂದಿತು. ಇನ್ನು ಪ್ರಯೋಜನವಿಲ್ಲವೆಂದುಕೊಂಡು ಕಳ್ಳರು ನಿರಾಶೆಯಿಂದ ಎತ್ತೋ ಹೊರಟು ಹೋಗಿದ್ದರು. ಬಾಲಚಂದ್ರನು ಪಟ್ಟಣಕ್ಕೆ ಹೋಗಿ ಅಣ್ಣನ ಆರೋಗ್ಯವನ್ನು ಕುರಿತು ವಿಚಾರಿಸಿದನು. ಈಗ ಗುಣಮುಖನಾಗುವುದನ್ನು ತಿಳಿದು ಸಮಾಧಾನ

ದಿಂದ, ಹಣದ ಚೀಲವನ್ನು ಬಿಸುಟಿದ್ದ ಮನೆಯ ಗುರುತನ್ನು ತಿಳಿದು, ಸಾಯಂಕಾಲದಲ್ಲಿ ನೀಲಕಂಠ ನಿರುವ ಗ್ರಾಮಕ್ಕೇ ಬಂದನು. ಈಗ ಆ ಮನೆಯ ಯಜಮಾನನಾದ ನೀಲಕಂಠನು ಆ ತೊಗಲಿನ ಚೀಲದ ಸಂಗತಿ ತನಗೇನೂ ತಿಳಿಯದೆಂದು ಸುಳ್ಳು ಹೇಳುತ್ತಿದ್ದಾನೆ. ತಾನು ಜಗಲಿಯ ತಡಿಕೆಯ ಹಿಂದೆ ಇಟ್ಟ ಚೀಲ ನೀಲಕಂಠನಿಗೆ ಸಿಕ್ಕಿದೆ ಎಂದೇ ಬಾಲಚಂದ್ರನ ನಂಬುಗೆ, ಹಟ.

ಅವನು ಹೇಳಿದುದನ್ನು ಕೇಳಿ ಅವನ ಸ್ವಾಮಿ ಭಕ್ತಿಗೆ ಆಶ್ಚರ್ಯಪಡುತ್ತ ಅವಂತಿ, ತನ್ನ ತಲೆ ದಿಂಬಿನ ಕೆಳಗಿದ್ದ ಹಣದ ಚೀಲವನ್ನು ತೆಗೆದು ಅವನ ಮುಂದೆ ನೀಡಿದಳು. ಆಗ ನೀಲಕಂಠನು ಅವಳಿಗೆ ಅಡ್ಡಬಂದು, "ಈ ಚೀಲ ಅವನಿಗೆ ಕೊಡಬೇಡ್ವೇ. ಇವನು ಹೇಳಿದ್ದೆಲ್ಲಾ ದೊಡ್ಡ ಕಟ್ಟುಕಥೆ. ಈ ಹಣದ ಚೀಲ ನನಗೆ ಹೇಗೆ ಸಿಕ್ಕಿತೆಂದು ಹೇಳುತ್ತೇನೆ ಕೇಳು" ಎಂದು ಆ ಸಂಗತಿಯನ್ನು ಹೇಳಿದನು.

ಅವನು ಮಗಳ ಮದುವೆಯ ವರದಕ್ಷಿಣೆಯ ಹಣಕ್ಕಾಗಿ ಎರಡು ಕಡೆಯಲ್ಲಿ ಪ್ರಯತ್ನಮಾಡಿದನು. ಅದೇನೂ ಫಲಿಸದೆ ನಿರಾಶೆಯಿಂದ ಮನೆಗೆ ಹಿಂದಿರುಗುತ್ತಿದ್ದ. ಅವನಿಗೆ ತನ್ನ ಜೀವಿತದ ಮೇಲೆಯೇ ಅಸಹ್ಯ ಹುಟ್ಟಿತು. ಇರುವ ಒಬ್ಬಳು ಮಗಳಿಗೆ ಕೂಡಾ ಮದುವೆ ಮಾಡುವ ಶಕ್ತಿ ಇಲ್ಲದ ತಾನು ಬದುಕಿದ್ದು ಏನು ಪ್ರಯೋಜನ ವೆಂದುಕೊಂಡು ರಾತ್ರಿಯಲ್ಲಿ ದಾರಿಯ ಬದಿಯ ಲ್ಲಿದ್ದ ಪಾಳುಬಾವಿಯ ಕಡೆಗೆ ತಡಬಡಿಸುತ್ತಾ ನಡೆಯತೊಡಗಿದನು.

ಆಗ ನೀಲಕಂಠನ ಹಿಂದೆ ನಡೆದು ಬರುತ್ತಿದ್ದ ಒಬ್ಬ ಮಧ್ಯಮ ವಯಸ್ಸಿನವನು, ಅವನ ತಡಬಡಿಕೆಯ ನಡಿಗೆಯನ್ನು ನೋಡಿ ಅನುಮಾನಪಟ್ಟು, ಪಾಳುಬಾವಿಯ ಅಂಚಿನಲ್ಲಿ ನಿಂತಿದ್ದ ನೀಲಕಂಠನನ್ನು ಥಕ್ಕನೆ ಹಿಡಿದು ತಡೆದು "ಇಂಥಾ ಕೆಲಸಕ್ಕೆ ಬೀಳಲು ಕಾರಣವೇನು ?" ಎಂದು ಕೇಳಿದನು. ನೀಲಕಂಠನು ಕಣ್ಣೀರು ತುಂಬಿಕೊಂಡು, "ಇರುವ ಮಗಳೊಬ್ಬಳಿಗೆ





ಮದುವೆ ಮಾಡಲು ಕೈಲಾಗದ ನಾನು ಬದುಕಿದ್ದು ಏನು ಪ್ರಯೋಜನ ?" ಎಂದು, ತನಗೆ ಬಂದ ಕಷ್ಟ ವನ್ನು ಕುರಿತು ಸ್ವಲ್ಪ ಹೇಳಿದನು.

ಅದನ್ನು ಕೇಳಿ ಹೊಸಬನು ನಕ್ಕು, "ಅಷ್ಟೇನಾ ? ನಿಜ ಹೇಳಬೇಕೆಂದರೆ ನನಗೆ ಹತ್ತು ಮಂದಿ ಹೆಣ್ಣು ಮಕ್ಕಳಿಗೆ ಮದುವೆ ಮಾಡುವಷ್ಟು ಶಕ್ತಿಯಿದೆ. ಆದರೆ ನನಗೆ ಮಕ್ಕಳೇ ಇಲ್ಲ. ತೆಗೆದುಕೊಳ್ಳಿ, ಈ ಹಣತುಂಬಿದ ತೊಗಲಿನ ಚೀಲ. ಇದು ನನ್ನ ಹಣ ವಲ್ಲದಿದ್ದರೂ ಸದ್ಯತೆಗೆದುಕೊಳ್ಳಿ. ನಿಮ್ಮ ವಿಳಾಸ ಹೇಳಿದರೆ, ತಿಂಗಳಿಗಿಷ್ಟು ಅಂತ ಆಮೇಲೆ ವಸೂಲು ಮಾಡಿಕೊಳ್ಳುತ್ತೇನೆ." ಎಂದು ಕೈಯಲ್ಲಿದ್ದ ತೊಗಲಿನ ಚೀಲವನ್ನು ನೀಲಕಂಠನಿಗೆ ಕೊಟ್ಟನು. ಆತನ ಹೆಸರು ರಾಜಯ್ಯನಂತೆ.

"ಅವಂತೀ, ಆ ರಾಜಯ್ಯನೆಂಬ ದೊಡ್ಡ ಮನಸ್ಸಿನವರು ಈ ಚೀಲ ನನಗೆ ಕೊಡುವುದನ್ನು ಈ ಬಾಲಚಂದ್ರ ಮರೆಯಲ್ಲಿದ್ದು ನೋಡಿರಬೇಕು. ಅದು ತನ್ನ ಚೀಲವೆಂದು ವೊಂಡು ಹಿಡಿಯು ತ್ತಾನೆ. ಸಾಕ್ಷಿ ಹೇಳಲು ಆ ರಾಜಯ್ಯ ಎಲ್ಲಿದ್ದಾ ರೆಂಬುದು ನನಗೆ ತಿಳಿಯದಲ್ಲಾ!" ಎಂದನು ನೀಲಕಂಠ ಬೇಸರದಿಂದ.

ಅಷ್ಟರಲ್ಲಿ ಸಾಕ್ಷಾತ್ ರಾಜಯ್ಯನೇ ಬೀದಿಯಿಂದ ಬಾಗಿಲ ಹತ್ತಿರ ಬಂದು ಒಳಗೆ ಇಣಿಕಿ, "ಎಲ! ನನ್ನ ಹೆಸರೇ ಹೇಳುತ್ತೀರಲ್ಲಾ! ಕತ್ತಲೆಯಲ್ಲಿ ಈ ಮನೆಯನ್ನು ನೆನಪಿಟ್ಟುಕೊಂಡುದು ಸರಿಹೋದ ಹಾಗಿದೆ!" ಎಂದನು ನಗುತ್ತಾ.

"ಇವರೇ ಈ ಚೀಲ ನನಗೆ ಕೊಟ್ಟವರು. ಬನ್ನಿ ಸ್ವಾಮಿ" ಎಂದು ನೀಲಕಂಠನು ರಾಜಯ್ಯನನ್ನು ಆಹ್ವಾನಿಸಿ, ಆ ಯುವಕನ ಸಮಾಚಾರವನ್ನು ಕೂಡಾ ಹೇಳಿ, "ಸತ್ಯವು ಇವನಿಗೆ ಅರ್ಥ ಆಗುವಹಾಗೆ ನೀವೇ ಹೇಳಬೇಕು" ಎಂದನು.

"ಕೇಳಿರಿ, ಅದು ನನ್ನ ಹಣ ಅಲ್ಲವೆಂದು ನಿಮಗೆ ಕೊಡುವಾಗಲೇ ಹೇಳಿದ್ದೇನಷ್ಟೆ?" ಎಂದು ತನ್ನ ಕಥೆಯನ್ನು ಹೇಳಿದನು.

ನೆರೆಯ ಗ್ರಾಮದ ಶ್ರೀಮಂತನಾದ ಅವನು ಪಟ್ಟಣದಲ್ಲಿ ಒಂದು ಮದುವೆಗೆ ಹೋಗಲು ಮೊನ್ನೆ ಬೆಳಂಜಾವದಲ್ಲೇ ಮನೆಯಿಂದ ಹೊರಟಿ ದ್ದನು. ಆ ಗ್ರಾಮದ ನೀಲಕಂಠನ ಮನೆಯ ಹತ್ತಿರ ಬರುವಾಗ ಮಳೆ ಪ್ರಾರಂಭವಾಯಿತು. ಅಂತಲೇ ಈ ಮನೆಯ ಜಗಲಿಯ ತಡಿಕೆಯ ಹಿಂದೆ ಮಳೆ ನಿಲ್ಲುವವರೆಗೆ ನಿಲ್ಲಬೇಕಾಯಿತು. ಅಲ್ಲಿ ಅವನ ಕಾಲಿಗೆ ತಗಲಿದ ಹಣದ ಚೀಲವನ್ನು ಎತ್ತಿ ಕೊಂಡನು. ಮನೆಗೆ ಬೀಗ ಹಾಕಿರುವುದನ್ನು ನೋಡಿ, ಮನೆಯವರು ಹೋಗುವಾಗ ಅವಸರದಲ್ಲಿ ಹಣದ ಚೀಲ ಮರೆತಿರಬಹುದೆಂದೂ, ಹಿಂದಿರುಗಿ ಹೋಗುವಾಗ ವಿಚಾರಿಸಿಕೊಳ್ಳೋಣವೆಂದೂ ಅಂದು ಕೊಂಡು, ಆ ಚೀಲದೊಂದಿಗೆ ಮುಂದೆ ಪ್ರಯಾಣ ಮಾಡಿದನು.

ಸ್ವಲ್ಪ ಮುಂದೆ ಹೋದಾಗ ನೀಲಕಂಠನು ಪಾಳು ಬಾವಿಗೆ ಬೀಳುವುದನ್ನು ತಡೆದು ಆ ಹಣದ ಚೀಲವನ್ನು ಅವನಿಗೆ ಕೊಟ್ಟಿದ್ದಾನೆ. ಈಗ ಮದುವೆಯ ಮನೆಯಿಂದ ಹಿಂದಿರುಗಿ ಬರುತ್ತಾ, ತನಗೆ ಹಣದ ಚೀಲ ಸಿಕ್ಕಿದ ತಡಿಕೇ ಜಗಲಿಯ ಮನೆಗೆ ಬಂದು ಅದರ ಸಂಗತಿ ವಿಚಾರಿಸಬೇಕೆಂದು ನೋಡಿದರೆ, ಅದೇ ನೀಲಕಂಠನ ಮನೆಯೆಂದು ಗೊತ್ತಾಯಿತು.

"ಹಾಗಾದರೆ ನಾನು ನಿಮಗೆ ಕೊಟ್ಟ ಚೀಲ ಈ ಬಾಲಚಂದ್ರನ ಯಜಮಾನರದಾಗಿರಬೇಕು. ಅದನ್ನು ಅವರಿಗೇ ಕೊಟ್ಟುಬಿಡಿರಿ. ನಿಮ್ಮ ಮಗಳ ಮದುವೇ ಖರ್ಚಿಗೆ ಬೇಕಾದಷ್ಟು ಹಣ ನಾನೇ ಕೊಟ್ಟುಬಿಡುತ್ತೇನೆ" ಎಂದು ರಾಜಯ್ಯ ಬಾಲಚಂದ್ರನನ್ನು ಪರೀಕ್ಷಿಸಿ ನೋಡುತ್ತ, "ನೀವು ನೋಡಿದ ವರ ಈ ಹುಡುಗನ ಪ್ರಾಯದವನಾಗಿರುತ್ತಾನೆಯೆ ?" ಎಂದು ಕೇಳಿದನು.

"ಎರಡು ಸಂಬಂಧಗಳಿವೆ. ಇನ್ನೂ ಗಟ್ಟಿ ನಿಶ್ಚಯವಾಗಿಲ್ಲ. ವರದಕ್ಷಿಣೆ ಎಂಟು ಸಾವಿರ ಕೇಳಿಸುವರೋ ಅಂತ ನೋಡಿ, ಯಾವುದೋ ಒಂದು ನಿಶ್ಚಯಿಸಬೇಕು" ಎಂದನು ನೀಲಕಂಠ, ರಾಜಯ್ಯನು ಬಾಲಚಂದ್ರನ ಭುಜ ತಟ್ಟಿ, "ನೀನು ಒಳ್ಳೆಯವನಯ್ಯ, ನಿನ್ನ ಒಡೆಯನ ಹಣ ಹೋದುದಕ್ಕೆ ಆತನಿಗಿಂತ ಹೆಚ್ಚು ಪೇಚಾಡಿದ ನಿನ್ನ ಗುಣ ನನಗೆ ತುಂಬಾ ಹಿಡಿಸಿತು. ನನಗೆ ಮಗಳಿರುತ್ತಿದ್ದರ ನಿನಗೇ ಕೊಡುತ್ತಿದ್ದೆ. ಈಗಾದರೂ ಅವಂತಿ ಒಪ್ಪಿದರೆ, ನೀನು ಅವಿವಾಹಿತ ತಾನೇ ? ಎಷ್ಟು ವರದಕ್ಷಿಣೆ ಕೇಳುತ್ತೀ ?" ಎಂದರು ನಗುತ್ತಾ.

ಬಾಲಚಂದ್ರನು ನೀಲಕಂಠನನ್ನೂ ಅವಂತಿಯನ್ನೂ ನೋಡಿದನು. ಅವಂತಿ ನಾಚಿಕೆಯಿಂದ ತಲೆ ತಗ್ಗಿಸಿಕೊಂಡಳು. ನೀಲಕಂಠನು ಮುಗುಳು ನಗು ಅರಳಿಸಿದನು.

"ತನ್ನ ಮದುವೆ ನಿಂತುಹೋದರೂ ಚಿಂತಿಲ್ಲವೆಂದುಕೊಂಡು ಹಣದಚೀಲ ನನಗೆ ಕೊಡಲು ಬಂದ ಅವಂತಿಯ ಒಳ್ಳೆಯತನ ನನಗೆ ತುಂಬಾ ಹಿಡಿಸಿದೆ. ವರದಕ್ಷಿಣೆಯ ಮಾತು ಮರಣದ ಅಂಚಿಗೇ ಒಯ್ಯುವಂಥಾದ್ದೆಂದು ತಿಳಿದ ಮೇಲೆ ಏಕೆ ಹೇಳುವಿರಿ ಆ ಮಾತು ?" ಎಂದನು ಬಾಲಚಂದ್ರ.

ವಸಂತೀ ಬಾಲಚಂದ್ರರ ಮುಖಗಳ ವಿಕಸನದಿಂದ ಅವರ ಮನೋಗತ ಸ್ಪಷ್ಟವಾಯಿತು.

"ಸರಿ. ಬರುವ ತಿಂಗಳು ಮದುವೆಯ ಮುಹೂರ್ತ. ಮದುವೆ, ಇಲ್ಲಿ ಅಲ್ಲ, ನನ್ನ ಮನೆಯಲ್ಲಿ, ಮಕ್ಕಳಿಲ್ಲದ ನಾನು ಹತ್ತು ಮಕ್ಕಳಿಗೆ ಮದುವೆ ಮಾಡಬಲ್ಲೆನೆಂದು ಈ ಮೊದಲೇ ಹೇಳಿದ್ದೆನಷ್ಟೇ ? ತಯಾರಾಗಿರಿ !" ಎಂದು ರಾಜಯ್ಯನು ನೀಲಕಂಠನ ಭುಜ ತಟ್ಟಿದನು.



# ಬದಲಾಗದ ಬುದ್ಧಿ

**ಒಂ**ದು ಊರಿನಲ್ಲಿ ಜೋಗಯ್ಯನೆಂಬ ಹಾಲಿನ ವ್ಯಾಪಾರಿ ಇದ್ದನು. ಅವನ ವಾಡಿಕೆದಾರರು ಎಷ್ಟು ಸಾರಿ ಆಕ್ಷೇಪಿಸಿ, ದೂರಿ ಕೋಪ ಮಾಡಿದರೂ ಹಾಲಲ್ಲಿ ನೀರು ಬೆರೆಸುವುದನ್ನು ನಿಲ್ಲಿಸಲೇ ಇಲ್ಲ. ಕಡೆಗೆ ಗ್ರಾಮದೊಳಗಿನ ಪ್ರಮುಖರೆಲ್ಲ ಕೂಡಿ ಅವನ ಹಸುಗಳನ್ನೆಲ್ಲ ಎಳೆದುಕೊಂಡು ಹೋಗಿ ಗ್ರಾಮಾಧಿಕಾರಿಯ ಮನೆಯಲ್ಲಿ ಕಟ್ಟಿಬಿಟ್ಟರು.

ಜೋಗಯ್ಯನು ಬೇರೆಲ್ಲಿಯಾದರೂ ಬದುಕುವ ದಾರಿ ನೋಡಿಕೊಳ್ಳಲು ಗುಡ್ಡದ ದಾರಿಯಲ್ಲಿ ಹೋಗುತ್ತಿರುವಾಗ, ಒಂದು ಕೆರೆಯ ಪಕ್ಕದಲ್ಲಿದ್ದ ಗುಹೆಯ ಮುಂದೆ ಒಬ್ಬ ಯೋಗಿ ಕುಳಿತಿರುವುದನ್ನು ನೋಡಿದನು.

ಜೋಗಯ್ಯ ಯೋಗಿಗೆ ನಮಸ್ಕಾರ ಮಾಡಿ, ತನ್ನ ಕಥೆಯನ್ನೆಲ್ಲಾ ಹೇಳಿಕೊಂಡು "ಸ್ವಾಮೀ, ಈಗ ನನಗೆ ಬುದ್ಧಿ ಬಂತು. ನನಗೆ ಹಾಲಿನ ವ್ಯಾಪಾರವಲ್ಲದೆ ಮತ್ತೇನೂ ತಿಳಿಯದು. ನೀವೇ ಏನಾದರೂ ಕರುಣಿಸಬೇಕು" ಎಂದು ಪ್ರಾರ್ಥಿಸಿದನು.

ಯೋಗಿ ಅವನ ಮೇಲೆ ಕನಿಕರಗೊಂಡು, ಪಕ್ಕದಲ್ಲಿದ್ದ ಕೆರೆಯನ್ನು ಜೋಗಯ್ಯನಿಗೆ ತೋರಿಸುತ್ತಾ, "ಇನ್ನು ಮೇಲೆ ಆ ಕೆರೆಯಲ್ಲಿ ನೀರಿಗೆ ಬದಲು ಹಾಲೇ ಇರುತ್ತದೆ. ಸುಖವಾಗಿ ಬದುಕು" ಎಂದನು.

ಜೋಗಯ್ಯನು ಯೋಗಿಗೆ ಬಾಗಿ ನಮಸ್ಕಾರ ಮಾಡುತ್ತ, "ಆ ಹಾಲಿನ ಕೆರೆಯ ಪಕ್ಕದಲ್ಲೇ ಎರಡು ನೀರಿನ ಕೆರೆಗಳನ್ನು ಕೂಡಾ ಸೃಷ್ಟಿಸಿ ಕೊಡಿ ಸ್ವಾಮೀ!" ಎಂದನು.

ಯೋಗಿ ಮಾತಾಡದೆ ಕಣ್ಣು ಮುಚ್ಚಿ ಧ್ಯಾನಮಗ್ನನಾದನು.





# ವಿಷ್ಣುಕಥ

ಸ್ವಚ್ಛವಾಗಿ ಬಿಳಿಯಾಗಿ ಶಾಂತ ಸಲಿಲವಾಗಿ ಹೊಳೆ ಹೊಳೆಯುವ ಬಿಳಿನೊರೆಗಳ ಅಲಂಕಾರದಿಂದೊಪ್ಪುವ ಹಾಲಿನ ಸಮುದ್ರದಲ್ಲಿ, ತ್ರಿಕೂಟವೆಂಬ ಪರ್ವತ ಶಿಖರಗಳಿದ್ದುವು. ಒಂದು ಕಬ್ಬಿಣದ ಶಿಖರ; ಇನ್ನೊಂದು ಬೆಳ್ಳಿಯದು; ಮೂರನೆಯದು ಬಂಗಾರದ ಶಿಖರ. ಆ ಶಿಖರಗಳ ನಡುವಿನಲ್ಲಿ ವಿವಿಧ ಫಲವೃಕ್ಷಗಳಿಂದ ತುಂಬಿದ ಮಹಾರಣ್ಯಗಳಿದ್ದುವು. ಆ ಅರಣ್ಯ ವನಗಳಲ್ಲಿ ವಿಹರಿಸುವ ಗಜೇಂದ್ರನೆಂಬ ಮದ್ದಾನೆಗೆ ದಶ ಲಕ್ಷ ಕೋಟಿ ಹೆಣ್ಣಾನೆಗಳು ಪ್ರೀತಿಯ ಪತ್ನಿಯರು. ಒಂದು ಸಾರಿ ಆ ಮಹಾಗಜ ರಾಜನು ತನ್ನ ಹೆಣ್ಣಾನೆಗಳೊಂದಿಗೆ ವಿಹಾರ ಮಾಡುತ್ತ, ದಾಹ ಶಾಂತಿ ಮಾಡಿಕೊಳ್ಳಲು ಮಹಾವನದ ಮಧ್ಯದಲ್ಲಿದ್ದ ಸರೋವರಕ್ಕೆ ಹೊರಟನು.

ಸರೋವರದಲ್ಲಿ ನೀರು ಕುಡಿದು ದಾಹ ತೀರಿಸಿಕೊಂಡ ಮೇಲೆ ಹೊಸ ಉತ್ಸಾಹದಿಂದ ತನ್ನ ಪತ್ನಿ ಆನೆಗಳೊಂದಿಗೆ ಜಲಕ್ರೀಡೆಗಿಳಿದು, ಈಜಾಡುತ್ತ ಅಲ್ಲೋಲಕಲ್ಲೋಲ ಮಾಡುತ್ತ ಅಟ್ಟಹಾಸದಿಂದಿರುವಾಗ, ಇದ್ದಕ್ಕಿದ್ದ ಹಾಗೆ ದೊಡ್ಡದೊಂದು ಮೊಸಳೆ ಕ್ರೂರ ಹಲ್ಲುಗಳಿಂದ ಆನೆಯ ಬಲಗಾಲನ್ನು ಹಿಡಿದುಕೊಂಡಿತು.

ಕೆಟ್ಟ ನೋವಿನಿಂದ ಮದಗಜವು ಮಾಡಿದ ಘೀಂಕಾರಕ್ಕೆ ಕಾಡಾನೆಗಳೆಲ್ಲಾ ಹೆದರಿ ಚೆಲ್ಲಾಚೆದುರಾಗಿ ಸರೋವರದ ಸುತ್ತಲೂ ಬೇಗಬೇಗನೆ ದಡಕ್ಕೆ ಸೇರಿ, ಗಜೇಂದ್ರನ ಒದರಾಟವನ್ನು ನೋಡಿ ಏನೂ ತೋರದೆ ಅಳುದನಿಯನ್ನೆಬ್ಬಿಸಿದುವೇ ಹೊರತು, ಮೊಸಳೆ ಆನೆಗಳ ಸೆಣಸಾಟದ ರಭಸಕ್ಕೆ ಹೆದರಿ ದೂರದಲ್ಲೇ ನಿಂತುವು. ಏನು ಮಾಡುವುದೆಂದು ಅವುಗಳಿಗೆ ತಿಳಿಯಲಿಲ್ಲ.

ಗಜೇಂದ್ರವು ತನ್ನ ಪೂರ್ಣಶಕ್ತಿಯಿಂದ ಮೊಸಳೆಯ ಪಟ್ಟಿನಿಂದ ತಪ್ಪಿಸಿಕೊಳ್ಳಲು, ರೋಷದಿಂದ ಮೊಸಳೆಯನ್ನು ಕೊಲ್ಲಲು ಪ್ರಯತ್ನಪಡುತ್ತಲೇ ಇದ್ದಿತು. ಮೊಸಳೆಯೂ ಅಸಾಧಾರಣವಾಗಿದ್ದುದರಿಂದ ಆನೆಯನ್ನು ಬಿಡಲೊಲ್ಲದು. ಹೆಣ್ಣಾನೆಗಳು ಶೋಕಿಸುತ್ತ ಹಸಿವು ತಾಳದಾದಾಗ ಹೋಗಿ ಏನಾದರೂ ತಿಂದು

## ೧. ಆದಿಮೂಲಾವತಾರ



ಮತ್ತೆ ಸರೋವರ ತೀರಕ್ಕೆ ಬಂದು ತಮ್ಮ ನಾಥನ ಅವಸ್ಥೆಯನ್ನು ನೋಡುತ್ತ, ಸರೋವರದ ಸುತ್ತಲೂ ತಿರುಗುತ್ತ ಕಾಲ ಕಳೆಯುತ್ತಿದ್ದುವು. ಕಣ್ಣೀರು ಸುರಿಸುತ್ತಿದ್ದುವು. ಸರೋವರದಲ್ಲಿ ಕರಿ ಮಕರಿಗಳ ಯುದ್ಧವು ಸಾಗಿಕೊಂಡೇ ಇದ್ದಿತು.

ಗಜೇಂದ್ರವು ದಂತಗಳಿಂದ ಮೊಸಳೆಯನ್ನು ತಿವಿಯುತ್ತಿತ್ತು. ಮೊಸಳೆ ಹಾರಿಹಾರಿ ಆನೆಯ ಶರೀರವೆಲ್ಲಾ ರಕ್ತಧಾರೆ ಕಟ್ಟುವಂತೆ ತನ್ನ ಮೊನಚಾದ ಉಗುರುಗಳಿಂದ ಪರಚುತ್ತಿತ್ತು. ಆನೆ ತಪ್ಪಿಸಿಕೊಳ್ಳಲು ಯತ್ನಿಸುವಾಗ ಕವಕ್ಕನೆ ಮತ್ತೆ ಅದರ ಕಾಲನ್ನು ಹಿಡಿಯುತ್ತಿತ್ತು.

ಆನೆ ಸೊಂಡಿಲಿನಿಂದ ಮೊಸಳೆಯ ಬೆನ್ನಿನ ಮೇಲೆ ಹೊಡೆಯುತ್ತಿತ್ತು. ಮೊಸಳೆ ಹರಿತವೂ ದೊರಗೂ ಆದ ಬಾಲದಿಂದ ಆನೆಯನ್ನೂ ಹೊಡೆಯುತ್ತಿತ್ತು. ಆಗ ಸರೋವರ ನೀರು ಮೇಲೆ ಚಿಮ್ಮಿ ಮಳೆಯಂತೆ ಸುತ್ತಲೂ ಬೀಳುತ್ತಿತ್ತು.

ಆನೆ ಮೊಸಳೆಯ ಮೇಲೆ ಬಿದ್ದು ನಾಲ್ಕು ಕಾಲುಗಳಿಂದ ಅದನ್ನು ದೂರ ಚಿಮ್ಮಿಸಿಬಿಡಲು ಪ್ರಯತ್ನಿಸುತ್ತಿತ್ತು. ಆಗ ಮೊಸಳೆ ನೀರಿನ ಅಡಿಯಲ್ಲಿ ಅಡಗಿಬಿಡುತಿತ್ತು. ಮೊಸಳೆಯ ಜಾಡು ಕಾಣದಿರುವುದನ್ನು ನೋಡಿ, ಆನೆ ತೀರಕ್ಕೆ ಹೋಗಲು ಕಾಲ್ತೆಗೆಯುವಷ್ಟರಲ್ಲಿ ಮೊಸಳೆ ತಟಕ್ಕನೆ ಆನೆಯ ಕಾಲನ್ನು ಹಿಡಿದು ನೀರಿಗೆ ಎಳೆದು ಮುಳುಗಿಸುತ್ತಿತ್ತು. ಹೀಗೆ ಎಡೆ ಬಿಡದೆ ಸಾಗುತ್ತಿದ್ದ ಆ ಕರಿ ಮಕರಿಗಳ ಹೋರಾಟ ನಿರ್ವಿರಾಮವಾಗಿ ಸಾವಿರ ವರ್ಷಗಳವರೆಗೆ ನಡೆಯಿತು.

ಆ ಗಜೇಂದ್ರವು ತನ್ನ ಸ್ವಂತ ಶಕ್ತಿಯನ್ನು ನಂಬಿಕೊಂಡು ಎಷ್ಟೇ ಸಾಹಸಮಾಡಿ ಹೋರಾಡಿದರೂ ಕ್ರಮವಾಗಿ ಆನೆಯ ಶಕ್ತಿ ತಗ್ಗುತ್ತಾ ಬಂತು. ಮೊಸಳೆ ಎಂದರೆ ದೊಡ್ಡ ಜಲಗ್ರಹ! ನೀರಿನಲ್ಲಿ ಅದರ ಶಕ್ತಿ ಅಪಾರ. ಆನೆಯ ರಕ್ತವನ್ನು ಹೀರುತ್ತ ಅದು ಮತ್ತಿಷ್ಟು ಬಲಗೊಂಡು ಬಲಿಯುತ್ತಿತ್ತು. ಅಂತಹ ಮೊಸಳೆಯ ಹಿಡಿತದಿಂದ ಮೋಕ್ಷಪಡೆಯಲು ಇನ್ನು ಆನೆಗೆ ಸಾಧ್ಯವಿಲ್ಲದಂತೆ ಕೃಶವಾಗಿ ಹೋಯಿತು.

"ನನ್ನ ಅವಸ್ಥೆ ಹೀಗಾಯಿತೇಕೆ? ಬಾಯಾರಿಕೆ ತೀರಿಸಿಕೊಳ್ಳಲು ಈ ಸರೋವರಕ್ಕೆ ಬಂದ ನಾನು ನೀರು ಕುಡಿದು ಸುಮ್ಮನೆ ಹೊರಟು ಹೋಗುವುದು ಬಿಟ್ಟು ಜಲಕ್ರೀಡೆಯಾಡಲು ಏಕೆ ಇಳಿದೆನೋ? ನನ್ನ ಹಾಳು ಬುದ್ಧಿಯೇ ನನ್ನನ್ನು ಮೊಸಳೆಗೆ ಹಿಡಿದುಕೊಟ್ಟಿತು" ಎಂದು ಚಿಂತಿಸಲು ತೊಡಗಿತು. ಆ ಗಜೇಂದ್ರ.

"ನನ್ನನ್ನು ರಕ್ಷಿಸುವವರು ಇನು ಯಾರು? ಕರೆಯಬೇಕು ಯಾರನ್ನು? ನನ್ನನ್ನು ನಾನು ರಕ್ಷಿಸಿಕೊಳ್ಳಲು ಸಾಧ್ಯವಾಗದ ಈ ಸ್ಥಿತಿಯಲ್ಲಿ ಯಾರೋ ಕಾಪಾಡುವವರೊಬ್ಬರು ಇರುವ ಹಾಗೆ ಮನಸ್ಸಿನಾಳದಲ್ಲಿ ಏನೋ ಒಂದು ಆಶೆ, ನಂಬುಗೆ. ಆ ಆಶೆಯಿಂದಲೇ ರಕ್ಷಣೆಯನ್ನು ಬಯಸುತ್ತಿದ್ದೇನೆ.

ಈ ನನ್ನ ಆಸೆಗೆ ಯಾವುದೋ ಒಂದು ಆಧಾರ ವಿಲ್ಲದಿದ್ದೀತೆ? ಆ ಆಧಾರವೇ ದೇವರೆಂದು ಕಾಣುತ್ತದೆ.

"ದೇವರು, ಭಗವಂತ, ಈಶ್ವರ ಎಂಬ ಭಾವನೆಗಳಿಗೆ ಆದಿ ಮೂಲನಾದ ಓ ದೇವರೇ! ಕಾರಣಗಳಿಗೆಲ್ಲಾ ನೀನೇ ಕಾರಣನು!

"ನನ್ನಂತಹ ಮದಗರ್ವಿತರಾದ ಮಂದಮತಿ ಜೀವಿಗಳಿಗೆ ಇಂತಹ ಆಪತ್ತು ಬಾರದವರೆಗೂ ನಿನ್ನ ಯೋಚನೆ ಬಾರದು. ಬಾಧೆಗಳಿಂದ ಸಂಕಟಪಟ್ಟು ನೊಂದರೆ ಹೊರತು ನಿನ್ನ ಅಗತ್ಯ ಗೊತ್ತಾಗುವುದಿಲ್ಲ. ಇದ್ದಾನೆ, ಇದ್ದಾನೆ ಎಂಬವನು ಇದ್ದಾನೋ ಇಲ್ಲವೋ ಎಂಬ ಆಂದೋಳನೆಗೊಳಗಾಗದೆ ನೀನು ಕಾಣಿಸಲಾರೆ" ಎಂದು ಆ ಮದ್ದಾನೆ ಮದವಿಳಿದು ಪರಿಪರಿಯಾಗಿ ಚಿಂತಿಸಿಕೊಂಡಿರುವಾಗ, ಮೊಸಳೆಯ ಓಡಿತ ಕಡಿತಗಳ ನೋವು ಸ್ವಲ್ಪ ತಗ್ಗಿದ ಹಾಗೆ ತೋರಿತು.

ಯಾವಾಗ ಆ ಗಜೇಂದ್ರನು ಚಿಂತಿಸಲು ಪ್ರಾರಂಭಿಸಿದನೋ ಆ ಕ್ಷಣದಲ್ಲೇ ಮೊಸಳೆಯ ಕೋರೆ ಹಲ್ಲುಗಳ ನಿಜ್ಜು ಬುಮ್ಮನ್ನ ತೊಡಗಿತು. ಅದರ ಗುಂಡಿಗೆಯಲ್ಲಿ ನಡುಕದ ಅಲೆ ಎದ್ದಿತು. ಆದರೂ ಅದು ಇನ್ನಷ್ಟು ರೋಷದಿಂದ ಗಜೇಂದ್ರನ ಕಾಲನ್ನು ಒತ್ತಿ ಒತ್ತಿ ರುಚಿ ಬಿಡದಹಾಗೆ ಹಿಚಿಕಿ ಹಿಂಡಿ ಹೀರುತ್ತಲೇ ಇದ್ದಿತು.

"ಹೇ ಸರ್ವೇಶ್ವರಾ! ಸಕಲ ಜೀವಿಗಳ ಕಷ್ಟವನ್ನೂ ನೋವನ್ನೂ ಪರಿಹರಿಸುವವನೇ! ಎಲ್ಲಾ ಕಡೆಗಳನ್ನೂ ನೋಡಿಕೊಂಡಿರುವವನೇ! ವ್ಯಾಪಿಸಿಕೊಂಡಿರುವವನೇ!

"ಎಲ್ಲಾ ದೇವತೆಗಳಿಗೂ ಮೂಲನಾದ ದೇವಾಧಿದೇವಾ! ಈ ಜಗತ್ತು ಹುಟ್ಟಲಿಕ್ಕೆ ಕಾರಣನಾದ ಆದಿಮೂಲನೇ! ನನ್ನನ್ನು ರಕ್ಷಿಸಬೇಕೆಂದು ನಿನ್ನನ್ನು ಎಷ್ಟು ಬಲವಾಗಿ ಬೇಡುತ್ತೇನೋ ಅಷ್ಟೇ ವೇಗ



ದಿಂದ ನೀನು ಬಂದು ನನ್ನನ್ನು ರಕ್ಷಿಸುವಿ ಎಂದು ನಂಬುತ್ತೇನೆ! ಬೇರೆ ದಿಕ್ಕಿಲ್ಲ: ನೀನು ರಕ್ಷಿಸಿ ತೀರುವಿ!

"ಎಲ್ಲದಕ್ಕೂ ನೀನೇ ಆಗಿ, ಮಾತಿಗೂ ಮನಸ್ಸಿಗೂ ದೊರಕದಿರುವ ಓ ಸರ್ವೇಶ್ವರಾ! ನನ್ನಂತಹ ದೀನರನ್ನು ಕಾಪಾಡುವ ಬಾಧ್ಯತೆ ನಿನ್ನದೇ ಅಲ್ಲವೇ?

"ಜೀವಶಕ್ತಿಗಳೆಲ್ಲಾ ನಶಿಸಿ ಹೋದ ನನ್ನಲ್ಲಿ ಈಗ ಕಣ್ಣೀರು ಕೂಡಾ ಬತ್ತಿಹೋಯಿತು. ನಿನ್ನನ್ನು ಗಟ್ಟಿಯಾಗಿ ಕೂಗಿ ಕರೆಯಲಿಕ್ಕೂ ಶಕ್ತಿಯಿಲ್ಲ: ಸ್ವರವೇ ಇಲ್ಲ: ಒಂದು ಸಣ್ಣ ಮೂಲುಗು ಸದ್ದೂ ಸಹಾ ಹೊರಡದ ಸ್ಥಿತಿ ಬಂತು. ಸ್ಮೃತಿ ಕೂಡಾ ತಪ್ಪುತ್ತಾ ಇದೆ.

"ಇನ್ನು ನನ್ನನ್ನು ರಕ್ಷಿಸಿದರೂ ಬಿಟ್ಟರೂ ನಿನ್ನ ಇಷ್ಟ. ನಿನ್ನ ಹೊರತು ಇನ್ನಾವ ದಿಕ್ಕೂ ಗತಿಯೂ ನನಗಿಲ್ಲ" ಎಂದು ಗಜೇಂದ್ರವು ಸೊರಗಿ ಶಲ್ಯವಾಗಿ, ಇರುವ ಶಕ್ತಿಯನ್ನೆಲ್ಲಾ ಸೇರಿಸಿ ಸೊಂಡಿಲೆತ್ತಿ ಕರೆಯುವಂತೆ ಅರೆಗಣ್ಣಿನಿಂದ ನೋಡುತ್ತಿತ್ತು.



ಮೊಸಳೆಗೆ ಸಹಾ ಬಲವು ತಗ್ಗುವ ಹಾಗೆ ತೋರುತ್ತಿತ್ತು. ಬಾಯಿ ಜಾರಿಜಾರಿ ಹೋಗುತ್ತಿತ್ತು. ಕುತ್ತಿಗೆ ಕಟ್ಟುವ ಹಾಗೆ ಆಗುತ್ತಿತ್ತು.

ತಾನು ಇರುವೆನೋ ಇಲ್ಲವೋ ತಿಳಿಯದ ಸ್ಥಿತಿಯಲ್ಲಿ ಆನೆ ಕಣ್ಣುಗಳನ್ನು ಮುಚ್ಚಿಕೊಂಡಿತು. ಸ್ವಲ್ಪವೂ ಚಲನೆ ಕಾಣಿಸಲಿಲ್ಲ, ಧ್ಯಾನಮುದ್ರೆಯಂತೆ.

ಆಗ ವಿಷ್ಣು ಅಲ್ಲಿ ಪ್ರತ್ಯಕ್ಷನಾದನು. ಆಕಾಶವೆಲ್ಲಾ ಅವನ ರೂಪದಿಂದ ತುಂಬಿಹೋಯಿತು. ತಾನೊಂದು ಸೂಕ್ಷ್ಮವಾದ ಅಣುವಾಗಿರುವಂತೆ ಗಜೇಂದ್ರನಿಗೆ ತೋರಿತು. ಕಣ್ಣು ತೆರೆದನು.

ಬಂದ ಕೂಡಲೇ ವಿಷ್ಣು ಅಭಯಹಸ್ತವನ್ನು ಆನೆಯ ಮಸ್ತಕದ ಮೇಲಿಟ್ಟು, ಚಕ್ರವನ್ನು ಮೊಸಳೆಯ ಮೇಲೆ ಪ್ರಯೋಗಿಸಿದನು.

ಪ್ರಚಂಡ ವೇಗದಿಂದ ತಿರುಗಿದ ವಿಷ್ಣುಚಕ್ರವು ಮೊಸಳೆಯ ತಲೆಯನ್ನು ತರಿದು ಹಾಕಿ, ವಿಷ್ಣುವಿನ ಹಸ್ತವನ್ನು ಸೇರಿತು.

ಕೂಡಲೇ ಮೊಸಳೆಯಿದ್ದ ಸ್ಥಳದಲ್ಲಿ ಒಬ್ಬ ಗಂಧರ್ವನು ಪ್ರತ್ಯಕ್ಷನಾದನು. ಹೂಹೂ ಎಂಬ ಹೆಸರು ಆ ಗಂಧರ್ವನಿಗೆ. ಅವನು ಮೊಸಳೆಯಾಗಿರಲು ಕಾರಣವೇನಂದರೆ, ಹಿಂದೆ ದೇವಲ ಋಷಿ ನೀರಿನಲ್ಲಿ ನಿಂತುಕೊಂಡು ಧ್ಯಾನಮಾಡುತ್ತಿದ್ದಾಗ, ಹೂಹೂ ಗಂಧರ್ವನು ನೀರಿನಡಿಯಲ್ಲಿ ಹೋಗಿ ಮೊಸಳೆಯಂತೆ ಅವನ ಕಾಲನ್ನು ಹಿಡಿದನು. ಈ ಚೇಷ್ಟೆಯಿಂದ ದೇವಲನಿಗೆ ಕೋಪ ಬಂದು ಮೊಸಳೆಯಾಗಿರುವಂತೆ ಅವನಿಗೆ ಶಾಪಕೊಟ್ಟನು. ವಿಷ್ಣುಚಕ್ರದ ಹೊರತು ಬೇರೆ ವಿಮೋಚನೆ ಇಲ್ಲವೆಂದೂ ಹೇಳಿದ್ದನು. ಅಂತಲೇ ಈಗ ಅವನ ಶಾಪ ತೀರಿಹೋಯಿತು.

ಹೀಗೆ ಮೊಸಳೆಯಿಂದ ಗಜೇಂದ್ರನನ್ನು ರಕ್ಷಿಸಿದ ವಿಷ್ಣು, ಗಜೇಂದ್ರನನ್ನು ಸರೋವರದಿಂದ ತೀರಕ್ಕೆ ಎತ್ತಿತಂದು, ಅಂಗೈಯಿಂದ ಅದರ ಕುಂಭಸ್ಥಳವನ್ನು ನೀವಿದನು. ಆ ದಿವ್ಯ ಸ್ಪರ್ಶದಿಂದ ಗಜೇಂದ್ರನ ಎಲ್ಲಾ ಜೀವಸತ್ವಗಳೂ, ಶರೀರ ಪುಷ್ಟಿಯೂ ಮೊದಲಿನಂತೆಯೇ ತಿರಿಗಿ ಬಂದಿತು. ಅದರೊಂದಿಗೆ ತಾನು ಯಾರೆಂಬ ಪೂರ್ವ ಜನ್ಮ ಜ್ಞಾನವೂ ಉಂಟಾಯಿತು.

ಹಿಂದಿನ ಜನ್ಮದಲ್ಲಿ ಅವನು ವಿಷ್ಣು ಚಿಂತನಾ ತತ್ಪರನಾದ ಇಂದ್ರದ್ಯುಮ್ನನೆಂಬ ಮಹಾರಾಜನು. ವಿಷ್ಣು ಧ್ಯಾನದಲ್ಲಿರುವ ಅವನು ಅಗಸ್ತ್ಯ ಮಹರ್ಷಿಯ ಬರುವಿಕೆಯನ್ನು ಗಮನಿಸಲಿಲ್ಲ. ಆದರಿಂದ ಅಗಸ್ತ್ಯನು ಕೋಪಗೊಂಡು ಅವನನ್ನು ಮದಗಜವಾಗಿ ಹುಟ್ಟುವಂತೆ ಶಾಪಕೊಟ್ಟನು. ಹೀಗೆ ಆ ರಾಜನು ಗಜೇಂದ್ರನಾಗಿ ಹುಟ್ಟಿ, ಕಡೆಗೆ ಮೋಕ್ಷಪಡೆದನು.

ಗಜೇಂದ್ರ ಮೋಕ್ಷದ ಈ ಕಥೆಯನ್ನು ನೈಮಿಶಾರಣ್ಯದಲ್ಲಿ ನಡೆಯುವ ಸತ್ರಯಾಗಕ್ಕೆ ಬಂದ ಶೌನಕಾದಿ ಮುನಿಗಳಿಗೆ, ದೊಡ್ಡ ಪುರಾಣಜ್ಞನಾದ ಸೂತಪುರಾಣಿಕನು ಹೇಳಿದನು.

ಮುನಿಗಳು ಸೂತನೊಂದಿಗೆ "ಮುನೀಂದ್ರಾ, ಗಜೇಂದ್ರ ಮೋಕ್ಷದ ಕಥೆ ಕೇವಲ ಒಂದು ಆನೆಯ ಕಥೆಯೆಂದು ಹೇಳುವಂತಿಲ್ಲ, ಜೀವ ಕೋಟಿಗಳಿಗೆಲ್ಲಾ, ಮುಖ್ಯವಾಗಿ ಅನೇಕ ಬಂಧಬಾಧೆಗಳಲ್ಲಿ ಸಿಕ್ಕಿಕೊಂಡು ತೊಳಲಾಡುವ ಮಾನವಜೀವಿಗಳಿಗೆ ವರ್ತಿಸುವ ಕಥೆಯಂತೆಯೇ ಇದೆ" ಎಂದು ತಮ್ಮ ಅಭಿಪ್ರಾಯ ಹೇಳಿದರು.



ಅದಕ್ಕೆ ಸೂತನು, "ನಿಜ. ಸರಿಯಾಗಿ ಹೇಳಿದಿರಿ. ಗಜೇಂದ್ರ ಮೋಕ್ಷವು ಅಂತರಾರ್ಥದಿಂದ ಕೂಡಿರು ಕಥೆಯೇ. ಅದನ್ನು ಯಾರು ಯಾವುದಕ್ಕೆ ಬೇಕಾದರೂ ಅನ್ವಯಿಸಿಕೊಳ್ಳಬಹುದು. ಕಾಲವು ವಿಷ್ಣುವಿನ ಅಧೀನದಲ್ಲಿ ಇರುವಂತಹುದು. ಕಾಲ ಚಕ್ರ ಭ್ರಮಣೆಯಲ್ಲಿ ಎಷ್ಟೋ ಸಮಸ್ಯೆಗಳೂ, ಕಷ್ಟ ಕೋಟಲೆಗಳೂ ಸಿಕ್ಕಿಕೊಂಡು ಉರುಳುತ್ತಾ ಇರುತ್ತವೆ." ಎಂದನು.

ಮುನಿಗಳು, "ಮುನಿವರ್ಯಾ, ಗಜೇದ್ರ ಮೋಕ್ಷದಿಂದ ಕಾರಣಗಳಿಗೆಲ್ಲ ಕಾರಣನು ಸರ್ವೇಶ್ವರನಾದ ವಿಷ್ಣುವೇ ಎಂದು ಗೊತ್ತಾಯಿತು. ಅಂತಹ ವಿಷ್ಣು ಮಹಿಮೆಗಳು ಇನ್ನೆಷ್ಟೋ ಇರಬಹುದಲ್ಲವೆ? ಅಂತಹುವನ್ನು ಪೂರ್ತಿಯಾಗಿ ಕೇಳಬೇಕೆಂದು ನಮಗೆ ಕುತೂಹಲ ಉಂಟಾಗಿದೆ. ನಿಮ್ಮ ಮುಂದೆ ನಾವೆಲ್ಲಾ ಮಕ್ಕಳಂತಹರು. ಆದುದರಿಂದ ವಿಷ್ಣುವನ್ನು ಕುರಿತು ವಿಶೇಷಗಳು ನಮಗೆ ಸುಲಭವಾಗಿ ಬೋಧವಾಗುವಂತೆ ಹೇಳಬೇಕೆಂದು ನಾವು ಪ್ರಾರ್ಥಿಸುತ್ತೇವೆ. ವ್ಯಾಸಮಹರ್ಷಿಯಿಂದ ಸಮಸ್ತ ಪುರಾಣಗಳನ್ನೂ, ಅವುಗಳ ವಿಶೇಷಾರ್ಥಗಳನ್ನೂ ತಿಳಿದಿರುವಂತಹ ನೀವೊಬ್ಬರೇ ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕು" ಎಂದರು ಕೈಮುಗಿದು.

ಸೂತಪುರಾಣಿಕನು ಅವರ ಮಾತಿಗೆ ಸಂತಸಪಟ್ಟು, "ಹಾಗೆಯೇ ಕೇಳುವಿರಂತೆ. ಕೇಳುವ ಕುತೂಹಲವಿರುವವರಿಗೆ ಹೇಳುವುದೆಂದರೆನನಗೂ ಸಂತೋಷವೇ. ವ್ಯಾಸ ಮಹರ್ಷಿ ವಿಷ್ಣುವನ್ನು ಕುರಿತು ಅನೇಕ ಲೀಲಾವತಾರ ವಿಶೇಷಗಳಿಂದ ಕೂಡಿದ ಪ್ರತ್ಯೇಕವಾದ ಮಹಾಭಾಗವತವೆಂಬ ಗ್ರಂಥವನ್ನು ರಚಿಸಿ ತನ್ನ ಕುಮಾರನಾದ ಶುಕನಿಗೆ ಬೋಧಿಸಿದ್ದಾರೆ. ವಿಷ್ಣು ಮಹಿಮೆಯನ್ನು ಕೇಳಬೇಕೆಂದು ಆಶೆಪಟ್ಟ ಪರೀಕ್ಷಿತ ಮಹಾರಾಜನಿಗೆ ಶುಕಯೋಗಿ ಅದನ್ನು ಹೇಳಿದನು. ಗಜೇಂದ್ರನನ್ನು ರಕ್ಷಿಸಲು ವಿಷ್ಣು ಎತ್ತಿದ ಅವತಾರವು ಆದಿಮೂಲಾವತಾರವೆಂದು ಹೆಸರು ಪಡೆದಿದೆ.

ವಿಷ್ಣು ಅನೇಕ ಅವತಾರವನ್ನು ಎತ್ತಿದ್ದಾನೆ. ಅವುಗಳಲ್ಲಿ ಪರಿಣಾಮ ದಶೆಗಳನ್ನು ಅನುಸರಿಸಿರುವ ದಶಾವತಾರಗಳೆಂಬ ಹತ್ತು ಅವತಾರಗಳು ಮುಖ್ಯವಾದುವು.

ನಾರವೆಂದರೆ ನೀರು. ನೀರಿಗೆ ಮೂಲವಾದವನೆಂಬ ಕಾರಣದಿಂದಲೇ ವಿಷ್ಣು ನಾರಾಯಣನಾದನು. ನಾರಾಯಣನಿಂದಲೇ ನೀರು ಹುಟ್ಟಿತು.



ನೀರಿನಿಂದ ಜೀವ ಹುಟ್ಟಿತು. ವಿಷ್ಣು ಜಲಚರವಾದ ಮೀನಾಗಿ ಅವತರಿಸಿದನು. ಅದೇ ಮತ್ಸ್ಯಾವತಾರ. ದಶಾವತಾರಗಳಲ್ಲಿ ಮತ್ಸ್ಯಾವಾತಾರವೇ ಸೃಷ್ಟಿಗೇ ಮೂಲವಾದ ಮೊದಲನೆಯದು.

ವಿಷ್ಣು ಜಲಮಯನಾಗಿರುವುದರಿಂದ ನೀಲ ಮೇಘದ ಬಣ್ಣದಲ್ಲಿರುತ್ತಾನೆ. ಮೇಘದಲ್ಲಿ ಮಿಂಚುಗಳಿರುವ ಹಾಗೆ ವಿಷ್ಣು ತೇಜೋಮಯನಾಗಿರುವನು. ಅವನಿಂದ ಬಂದ ಜಲವು ಕೂಡಾ ತೇಜಸ್ಸಿನಿಂದ ತುಂಬಿಕೊಂಡು ಬೆಳ್ಳಗಿನ ಕಿರಣಗಳನ್ನು ಚಿಮ್ಮಿಕೊಂಡಿರುತ್ತದೆ. ಆ ಜಲರಾಶಿಯೇ ಕಾರಣೋದಕವಾದ ಕ್ಷೀರಸಾಗರ.

ಕ್ಷೀರ ಸಾಗರದಲ್ಲಿ ಅನಂತವಾದ ಕಾಲವು ಶೇಷ ಸರ್ಪದ ರೂಪದಲ್ಲಿ ಸುರುಳಿ ಸುತ್ತಿಕೊಂಡಿರುತ್ತದೆ. ಆ ಶೇಷನಿಗೆ ಸಾವಿರ ಹೆಡೆಗಳು. ಅಂತ್ಯವೆಂಬುದಿಲ್ಲದ ಕಾಲಶೇಷನ ಮೇಲೆ ಶೇಷಶಾಯಿಯಾಗಿ ವಿಷ್ಣು ಶಯನಿಸಿಕೊಂಡಿರುವಾಗ, ಅವನ ಹೊಕ್ಕುಳಿನ ನಾಳದಿಂದ ದೊಡ್ಡದೊಂದು ಪದ್ಮವು ಮೇಲೆದ್ದಿತು. ಆ ಪದ್ಮದಲ್ಲಿ ಬ್ರಹ್ಮನು ಆವಿರ್ಭವಿಸಿದನು. ಆ ಬ್ರಹ್ಮನು ಎಲ್ಲವನ್ನೂ ಸೃಷ್ಟಿಸಿದನು.

ಅನಂತವಾದ ಕಾಲವು ಯುಗಗಳಾಗಿ ಸಾಗುತ್ತಾ ಇರುತ್ತದೆ.

ಕೃತ, ತ್ರೇತ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳು ಕೂಡಿ ಒಂದು ಮಹಾಯುಗವೆನಿಸುತ್ತದೆ.

ಸಾವಿರ ಮಹಾಯುಗಗಳು ಕೂಡಿ ಒಂದು ಕಲ್ಪವೆನಿಸುವುದು. ಈ ಕಲ್ಪಕಾಲವು ಬ್ರಹ್ಮನಿಗೆ ಒಂದು ಹಗಲು ಮಾತ್ರವೇ ! ಈ ಹಗಲು ಪೂರ್ತಿಯಾದ ಕೂಡಲೇ ಅವನಿಗೆ ದಣಿವಿನಿಂದ ವಿಶ್ರಾಂತಿ ಪಡೆಯುವ ಕಾಲ ಬರತ್ತದೆ. ಅದೇ ಕಲ್ಪಾಂತವೆನಿಸಿ ಎಲ್ಲೆಲ್ಲೂ ಗಾಢಾಂಧಕಾರವಾಗುತ್ತದೆ. ವಿಷ್ಣುವಿಂದ ಹೊರಹೊರಟ ಸಂಕರ್ಷಣಾಗ್ನಿಯ ಬಿಸಿಯ ಜ್ವಾಲೆ ಸಮಸ್ತವನ್ನೂ ಸುಟ್ಟು ಹಾಕಿ ಬಿಡುತ್ತದೆ. ಪ್ರಚಂಡ ಬಿರುಗಾಳಿ ಬೀಸಿಕೊಂಡೇ ಇರುತ್ತದೆ. ಕಾರ್ಮೋಡಗಳು ದೊಡ್ಡ ದೊಡ್ಡ ಹಿಂಡುಗಳಾಗಿ ಆನೆಯ ಸೊಂಡಿಲಿನಂತಹ ಜಲಧಾರೆಯನ್ನು ಸುರಿಸಿಕೊಂಡೇ ಇರುತ್ತವೆ. ಮಹಾ ಸಮುದ್ರವು ಆಕಾಶವನ್ನು ಮುಟ್ಟುವಂತೆ ಉಕ್ಕುತ್ತದೆ. ಭೂ, ಭುವರ್, ಸುವರ್ಲೋಕಗಳು ಮುಳುಗುತ್ತವೆ. ಎಲ್ಲಿ ನೋಡಿದರೂ ನೀರಿನ ಬೀಭತ್ಸ ದೃಶ್ಯವೇ ಹೊರತು ಮತ್ತೇನೂ ಇರುವುದಿಲ್ಲ. ಆ ವಿಧವಾಗಿ ಪ್ರಳಯ ಸಂಭವಿಸುತ್ತದೆ. ಬ್ರಹ್ಮನು ನಿದ್ದೆ ಮಾಡುವ ಒಂದು ದಿನದ ಮರು ಕಲ್ಪವೇ ಅವನಿಗೆ ರಾತ್ರಿ ! ಅದು ಕಾಲ ಶೇಷನ ಅರ್ಧ ಸುತ್ತು.

ಇಂತಹ ಒಂದು ಹಗಲಿನ ಕಲ್ಪಾಂತವು ಸಮೀಪಿಸುವ ಕಾಲದಲ್ಲಿ ಸತ್ಯವ್ರತನೆಂಬ ಒಬ್ಬ ರಾಜರ್ಷಿ ನದಿಯಲ್ಲಿ ಸ್ನಾನಮಾಡಿ, ನೀರಲ್ಲಿ ನಿಂತು ನಾರಾಯಣನನ್ನು ಧ್ಯಾನಿಸುತ್ತ ಸೂರ್ಯಾರ್ಘ್ಯಕ್ಕಾಗಿ ಬೊಗಸೆಯಲ್ಲಿ ನೀರನ್ನೆತ್ತಿದಾಗ, ಅವನ ಬೊಗಸೆಯಲ್ಲಿ

ಬಂಗಾರದ ರಂಗಿನ ಒಂದು ಸಣ್ಣ ಮೀನು ಸೇರಿಕೊಂಡಿದ್ದಿತು. ಸತ್ಯವ್ರತನು ಅದನ್ನು ನೋಡಿ ನದಿಯಲ್ಲಿ ಬಿಡಲು ಹವಣಿಸಿದಾಗ, ಆ ಚಿಕ್ಕ ಮೀನು. "ಓ ರಾಜಾ! ನಮ್ಮ ಮೀನಿನ ಜಾತಿ ಬಹಳ ಕೆಟ್ಟದ್ದು. ಚಿಕ್ಕ ಮೀನುಗಳನ್ನು ದೊಡ್ಡ ಮೀನುಗಳು ನುಂಗುತ್ತವೆ. ಅವುಗಳಿಂದ ತಪ್ಪಿಸಿಕೊಂಡರೂ ಬೆಸ್ತರು ಬಲೆ ಹಾಕಿ ಹಿಡಿದು ಅವುಗಳನ್ನು ಕೊಲ್ಲುತ್ತಾರೆ. ಆದುದರಿಂದ ನಿನ್ನ ರಕ್ಷಣೆಯನ್ನು ಆಶಿಸಿಯೇ ನಿನ್ನ ಬೊಗಸೆಗೆ ಬಂದಿದ್ದೇನೆ. ನಿರ್ದಯನಾಗಿ ನನ್ನನ್ನು ಬಿಟ್ಟು ಬಿಡಬೇಡ." ಎಂದು ಹೇಳಿತು.

ಸತ್ಯವ್ರತನು ಆಶ್ಚರ್ಯದಿಂದ ಆ ಮುದ್ದು ಮೀನನ್ನು ತನ್ನ ಕಮಂಡಲುವಿನ ನೀರಿನಲ್ಲಿ ಹಾಕಿ ಅದನ್ನು ತನ್ನ ನಗರಕ್ಕೆ ತೆಗೆದುಕೊಂಡು ಹೋದನು. ಸತ್ಯವ್ರತನು ಮಹಾರಾಜನಾಗಿ, ರಾಜ್ಯ ಪಾಲನೆ ಮಾಡುತ್ತ, ತಪಸ್ಸನ್ನೂ ಮಾಡಿಕೊಂಡು ರಾಜರ್ಷಿ ಎನಿಸಿದವನು. ವಿಷ್ಣು ಭಕ್ತನೂ, ಮಹಾಜ್ಞಾನಿಯೂ ಆಗಿರುವವನು.

ಅವನ ಕಮಂಡಲುವಿನೊಳಗಿದ್ದ ಮರಿ ಮೀನು ಮರುದಿನಕ್ಕೇ ತುಂಬಿ ಬೆಳೆದು ಉಸಿರು ಸಿಕ್ಕಿಕೊಂಡಂತಾಗಿ "ಓ ರಾಜಾ! ನನ್ನನ್ನು ಇದರೊಳಗಿನಿಂದ ತೆಗೆದು ಸ್ವಲ್ಪ ದೊಡ್ಡ ನೀರಿಗೆ ಸೇರಿಸಯ್ಯಾ!" ಎಂದು ಮೊರೆಯಿಟ್ಟಿತು.

ಸತ್ಯವ್ರತನು ಆ ಮೀನನ್ನು ದೊಡ್ಡದೊಂದು ನೀರತೊಟ್ಟಿಯಲ್ಲಿ ಬಿಟ್ಟನು. ಸ್ವಲ್ಪ ಹೊತ್ತಿಗೆಲ್ಲಾ ಆ ಮೀನು ಇನ್ನಷ್ಟು ಬೆಳೆದು, ಆ ತೊಟ್ಟಿಯೂ ಸಾಲದೆ ಒದರಾಡ ತೊಡಗಿತು. ಅದನ್ನು ನೋಡಿ ಸತ್ಯವ್ರತನು ಅದನ್ನು ಒಂದು ಸಣ್ಣ ಮಡುವಿಗೆ ಒಯ್ದು ಹಾಕಿದನು. ಅದು ಇನ್ನೂ ಬೆಳೆಯುತ್ತಲೇ ಇದ್ದಿತು. ಆ ಮಡುವಿನಿಂದ ದೊಡ್ಡ ಸರೋವರಕ್ಕೂ, ಸರೋವರದಿಂದ ಮಹಾನದಿಯ ಜಲಾಶಯಕ್ಕೂ ಸೇರಿಸಿದರೂ, ಅದರ ಬೆಳವಣಿಗೆಗೆ ಅದಾವುದೂ ಸಾಲದಾಯಿತು. ಸತ್ಯವ್ರತನು ಆ ಮಹಾಮತ್ಸ್ಯವನ್ನು ಕಡೆಗೆ ಸಮುದ್ರಕ್ಕೇ ಸೇರುವಂತೆ ಮಾಡಿದನು. ಆಗ ಆ ಮೀನು, "ಓ ರಾಜರ್ಷೀ! ನಿನ್ನ ರಕ್ಷಣೆಯನ್ನು ಪ್ರಾರ್ಥಿಸಿ ಬಂದ ನನ್ನನ್ನು ಮತ್ತೆ ಸಮುದ್ರಕ್ಕೇ ಸೇರಿಸಿದೆಯಾ? ಇದು ನ್ಯಾಯವೇ? ಮೊಸಳೆಗಳೂ ತಿಮಿಂಗಿಲಗಳೂ ನನ್ನನ್ನು ನುಂಗಿದರೆ ಏನು ಗತಿ?" ಎಂದು ನೇರಾಗಿಯೇ ಕೇಳಿತು.

ಅದಕ್ಕೆ ಸತ್ಯವ್ರತನು "ಓ ಮಹಿಮಾವಂತವಾದ ಮಹಾ ಮೀನವೇ! ಇದಕ್ಕಿಂತ ಹೆಚ್ಚಾಗಿ ನಾನೇನು ಮಾಡಬೇಕೋ ನೀನೇ ಹೇಳಿಬಿಡು. ಕ್ಷಣಕ್ಷಣಕ್ಕೂ ಶತಶತ ಯೋಜನಗಳಷ್ಟು ಬೆಳೆಯುವ ನಿನ್ನನ್ನು ನುಂಗುವಂತಹ ಹೆಬ್ಬಾಯಿಯ ಪ್ರಾಣಿ ಇನ್ನಾವುದಿದ್ದೀತು!" ಎಂದನು.





# ನಾಲ್ವರು ಹಂತಕರು

**ಯಾ**ವುದೋ ಒಂದು ಕಾಲದಲ್ಲಿ ಚೀನಾ ದೇಶದ ಒಂದು ಊರಿನಲ್ಲಿ ಧನಿಕನಾದ ಒಬ್ಬ ದರ್ಜಿಯವನಿದ್ದನು. ಕೆಲಸವೇನೂ ಇಲ್ಲದುದರಿಂದ ವಿನೋದಪ್ರಿಯನಾದ ಅವನು ಹೊತ್ತುಕಳೆಯಲಿಕ್ಕಾಗಿ, ಆಗಾಗ ತನ್ನ ಹೆಂಡತಿಯನ್ನು ಕರೆದುಕೊಂಡು ನಗರದೊಳಗಿನ ವಿನೋದಗಳನ್ನು ನೋಡುತ್ತ ವಿಹರಿಸುವುದರಲ್ಲೇ ದಿನಗಳನ್ನು ಕಳೆಯುತ್ತಿದ್ದನು.

ಎಂದಿನಂತೆ ಒಂದು ದಿನ ಆ ದರ್ಜಿಯವನು ಸಪತ್ನೀಕನಾಗಿ ನಗರದೊಳಗೆಲ್ಲಾ ತಿರುಗಾಡಿ ಸಾಯಂಕಾಲದ ಮೇಲೆ ಮನೆಗೆ ಹಿಂತಿರುಗುತ್ತಿರುವಾಗ, ದಾರಿಯಲ್ಲಿ ಅವನಿಗೊಬ್ಬ ಕುಳ್ಳನು ಕಾಣಿಸಿದನು. ತೀರ ಕುಳ್ಳನಾದ ಅವನು ಬಗೆಬಗೆಯ ಚೇಷ್ಟೆಗಳನ್ನು ಮಾಡುತ್ತ ಸುತ್ತುಮುತ್ತಲಿನವರನ್ನು ಜೋರು ಜೋರಾಗಿ ನಗಿಸುತ್ತಿದ್ದನು. ದರ್ಜಿಯೂ ಅವನ ಹೆಂಡತಿಯೂ ಆ ಕುಳ್ಳನ ಹಾಸ್ಯದಾಟಗಳಿಂದ ಬಿದ್ದು ಬಿದ್ದು ನಕ್ಕು, ಕಡೆಗೆ ಅವನ ಮೇಲಿನ ಮುಚ್ಚಟೆಯಿಂದ, ಅವನನ್ನು ಆ ರಾತ್ರಿ ತಮ್ಮ ಮನೆಗೆ ಅತಿಥಿಯಾಗಿ ಊಟಕ್ಕೆ ಬರಬೇಕೆಂದು ಕರೆಯನ್ನಿತ್ತರು.

ಕುಳ್ಳನು ಸಂತೋಷದಿಂದ ದರ್ಜಿ ದಂಪತಿಗಳೊಂದಿಗೆ ಹೊರಟನು. ದರ್ಜಿ ಅವನನ್ನು ಮನೆಯಲ್ಲಿ ಕೂಡಿಸಿ ಅಂಗಡಿಯಿಂದ ಬೇಯಿಸಿದ ಮೀನು ರೊಟ್ಟಿ, ನಿಂಬೇಕಾಯಿ ಉಪ್ಪಿನಕಾಯಿ, ಬಿಳಿಯೆಳ್ಳಿನ ಹಲ್ವಾ ಮುಂತಾದುವನ್ನು ಕೊಂಡುಕೊಂಡು ಬಂದನು, ಒಳ್ಳೆಯ ಪಾನೀಯವನ್ನೂ ಮಾಡಿಸಿದನು. ತರುವಾಯ ಮೂವರೂ ಊಟಕ್ಕೆ ಕುಳಿತರು.

ಬಹಳ ಉಲ್ಲಾಸದಿಂದ ಊಟ ನಡೆಯುತ್ತಿದ್ದಾಗ. ದರ್ಜಿಯ ಹೆಂಡತಿ ದೊಡ್ಡ ಮೀನಿನ ತುಂಡನ್ನು ಹಿಡಿದು ಕುಳ್ಳನ ಬಾಯಿಯೊಳಗೆ ತುರುಕಿ, ಅವನ ಬಾಯಿಯನ್ನು ಗಟ್ಟಿಯಾಗಿ ಮುಚ್ಚಿ. "ಇದೀ ಒಂದೇ ಸಾರಿ ನುಂಗಬೇಕು" ಎಂದಳು. ಕುಳ್ಳನು ಬಹು ಕಷ್ಟದಿಂದ ನುಂಗಲು ಪ್ರಯತ್ನಿಸಿದನು. ದುರದೃಷ್ಟವಶಾತ್ ಈ ಹಾಸ್ಯಚೇಷ್ಟೆಯೇ ವಿಪರೀತಕ್ಕೆ ಒಯ್ದುಬಿಟ್ಟಿತು. ಆ ಮೀನಿನೊಳಗೊಂದು ದೊಡ್ಡ ಮುಳ್ಳಿದ್ದು, ಅದು ಕುಳ್ಳನ ಕಂಠದೊಳಗೆ ಚುಚ್ಚಿಕೊಂಡಿತು. ಕೂಡಲೇ ಅವನು ತಟಪಟಾಯಿಸುತ್ತ ಹಾಗೆಯೇ ಕಣ್ಣುಗಳನ್ನು ತೇಲಬಿಟ್ಟು ಪ್ರಾಣಬಿಟ್ಟನು. ಅದನ್ನು ನೋಡಿ ದರ್ಜಿಯವನು, "ಅರೇ



ಅಲ್ಲಾ! ಇವನ ಪ್ರಾಣ ನಮ್ಮ ಕೈಯಿಂದ ಹೋಯಿತಲ್ಲಾ! ಎಂಥಾ ಗಂಡಾಂತರ ತಲೇಮೇಲೆ ಬಿತ್ತು! ನಾವೇಕೆ ಇವನನ್ನು ಕರೆದುಕೊಂಡು ಬಂದೆವೋ!" ಎಂದು ಚಡಪಡಿಸ ತೊಡಗಿದನು.

"ಹೀಗೆ ಕೈ ಕಾಲು ಗೆಟ್ಟರೆ ಹೇಗೆ ಮತ್ತೆ? ಏನೋ ಒಂದು ಮಾಡಬೇಕಾದ್ದನ್ನು ಬೇಗನೇ ಮಾಡಬೇಕು." ಎಂದಳು ಹೆಂಡತಿ.

"ಏನು ಮಾಡುವುದೆಂದು ನೀನೇ ಹೇಳು. ನಿನ್ನ ಕೈಯಿಂದ ತಾನೇ ಸತ್ತ? ಒಂದು ಉಪಾಯ ಹೇಳೇ!" ಎಂದನು ದರ್ಜಿಯವನು.

"ಇವನ ಮೇಲೆ ಬಟ್ಟೆ ಸುತ್ತಿ ಹೆಗಲ ಮೇಲೆ ಹೊತ್ತುಕೊಳ್ಳಿ. ಕುಳ್ಳನಾದರಿಂದ ಭಾರವೇನಿಲ್ಲ. ನಾವಿಬ್ಬರೂ ನಮ್ಮ ಮಗುವಿಗೆ ರೋಗ ಬಂತೆಂದು ನಟಿಸುತ್ತ ವೈದ್ಯರಲ್ಲಿಗೆ ಹೋಗೋಣ" ಎಂದಳು ಹೆಂಡತಿ. ದರ್ಜಿಯವನು ಕುಳ್ಳನ ಶರೀರದ ಮೇಲೆ ಬಟ್ಟೆಯನ್ನು ಹೊದೆಸಿ, ಎತ್ತಿಕೊಂಡು ಬೀದಿಗೆ ಬಂದನು. ಅವನ ಹೆಂಡತಿ ಮುಂದೆ ನಡೆಯುತ್ತ, "ಅಯ್ಯೋ! ನನ್ನ ಮಗೂಗೆ ಹಾಳಾಗಿಹೋದ ಮಶೂಚಿಕಾ ರೋಗ ಬರಬೇಕೇ? ಯಾರು ಕಾಪಾಡುವರಪ್ಪಾ! ಯಾವ ವೈದ್ಯರಾದರೂ ಸಿಕ್ಕಿದರೆ ಒಳ್ಳೇದಿತ್ತು. ವೈದ್ಯರ ಮನೆ ಎಲ್ಲಿದೆಯೋ!" ಎಂದು ಗಟ್ಟಿಯಾಗಿ ಕೂಗತೊಡಗಿದಳು.

ಮಶೂಚಿಕೆ ಎಂಬ ಮಾತು ಕಿವಿಗೆಬಿದ್ದ ಕೂಡಲೇ ಬೀದಿಯಲ್ಲಿ ಹೋಗುವವರು ಅವರಿಂದ ದೂರ ದೂರ ತೊಲಗಿದರು. ದರ್ಜಿಯ ಹೆಂಡತಿ ಅವರನ್ನು ನೋಡಿ, "ವೈದ್ಯರ ಮನೆ ಎಲ್ಲಿದೇರೀ? ಸ್ವಲ್ಪದಾರಿ ಹೇಳಿರಪ್ಪಾ! ದಿಕ್ಕು ಗೊತ್ತಾಗದೆ ತಿರುಗುತ್ತಿದ್ದೇವಯ್ಯಾ! ದಿಕ್ಕಾದರೂ ಹೇಳಿ!" ಎಂದು ಕೇಳಿದಳು. ಕಡೆಗೆ ಯಾರೋ ಒಬ್ಬರು ಅವರಿಗೆ ಒಬ್ಬ ವೈದ್ಯನ ಮನೆಯನ್ನು ತೋರಿಸಿದರು.

ದರ್ಜಿಯವನು ಆ ವೈದ್ಯನ ಮನೆಯ ಮುಂಬಾಗಿಲನ್ನು ತಟ್ಟಿದನು. ಒಬ್ಬ ನೀಗ್ರೋ ಗುಲಾಮಳು ಬಾಗಿಲು ತೆರೆದು ನೋಡಲು, ದರ್ಜಿಯ ಹೆಂಡತಿ ಅವಳೊಂದಿಗೆ, "ನಮ್ಮ ಮಗುವಿಗೆ ಏನೋ ರೋಗ ಬಂತಮ್ಮಾ. ಬೇಗ ವೈದ್ಯರನ್ನು ಬಂದು ನೋಡಲು ಹೇಳಮ್ಮಾ, ನಿನಗೆ ಪುಣ್ಯಬಂದೀತು" ಎಂದು ಗೋಗರೆಯುತ್ತ ಆ ಗುಲಾಮಳ ಕೈಯಲ್ಲಿ ಒಂದು ಬೆಳ್ಳಿ ನಾಣ್ಯ ಹಾಕಿದಳು.

ಆ ಮಾತನ್ನು ಹೇಳಲು ನೀಗ್ರೋ ಗುಲಾಮಳು ಮಾಳಿಗೆಯ ಮೇಲೆ ಏರಿಹೋದ ಕೂಡಲೇ, ಗಂಡ ಹೆಂಡಿರಿಬ್ಬರೂ ಒಳಗೆ ಹೋಗಿ ಕುಳ್ಳನ ಶವವನ್ನು ಮೆಟ್ಟಿಲಿನ ಮೇಲಿಟ್ಟು, ಹಿಂದಿರುಗಿ ನೋಡದೆ ಬಹುವೇಗವಾಗಿ ಓಡಿ ಹೋಗಿಬಿಟ್ಟರು.

ಇಷ್ಟರಲ್ಲಿ ನೀಗ್ರೋ ಗುಲಾಮಳು ಮಾಳಿಗೆಯಲ್ಲಿದ್ದ ವೈದ್ಯನ ಕೈಗೆ ಬೆಳ್ಳಿ ನಾಣ್ಯವನ್ನು ಕೊಟ್ಟು, ಯಾರೋ ಚಿಕಿತ್ಸೆಗೆ ಬಂದಿರುವ ಸಂಗತಿಯನ್ನು ಹೇಳಿದಳು. ವೈದ್ಯನು ಬೆಳ್ಳಿ ನಾಣ್ಯವನ್ನು ನೋಡಿ

ಆನಂದದಿಂದ, ದೀಪ ತೆಗೆದುಕೊಳ್ಳಬೇಕೆಂಬುದನ್ನೂ ಮರೆತು ಬೇಗಬೇಗನೆ ಮೆಟ್ಟಲಿಳಿದು ಬರುವಾಗ, ಕತ್ತಲೆಯಲ್ಲಿ ಕುಳ್ಳನ ಶರೀರವನ್ನು ತುಳಿದು ಹೊರಳಿಸಿಬಿಟ್ಟನು. ಆ ಶರೀರವು ಮೆಟ್ಟಲಿನಿಂದ ಹೊರಳಿ ಉರುಳಿ ನೆಲಕ್ಕೆಬಿತ್ತು. ವೈದ್ಯನು ಗಾಬರಿಯಿಂದ ಕೆಳಗೆ ಬಂದು ನೋಡಿದರೆ ಶವ!

ಇದು ತನ್ನಿಂದಾದ ಕೊಲೆಯೇ ಎಂದು ವೈದ್ಯನಿಗೆ ತುಂಬ ಭಯವಾಯಿತು. ಈ ಶವವನ್ನು ಏನು ಮಾಡುವುದೆಂದು ತೀವ್ರವಾಗಿ ಆಲೋಚನೆ ಮಾಡಿದನು. ಅವನು ಅದನ್ನು ತನ್ನ ಹೆಂಡತಿಯ ಬಳಿಗೆ ಎತ್ತಿಕೊಂಡು ಹೋಗಿ ನಡೆದ ಸಂಗತಿಯನ್ನು ಹೇಳಿದನು.

"ಇದನ್ನು ಮೇಲೆ ಒಯ್ದು ಆಚೆಗಿರುವ ಪಕ್ಕದ ಮನೆಯವರ ಹಿಂದಿನ ಬದಿಗೆ ಜಾರಿಸಿಬಿಡೋಣ. ಆ ಮನೆಯವನು ಸುಲ್ತಾನರ ಮನೆಯ ಪಾಕಶಾಲಾಧಿಕಾರಿ. ಅವರ ಮನೆ ತುಂಬಾ ಬೆಕ್ಕುಗಳೂ, ನಾಯಿಗಳೂ, ಇಲಿ ಹೆಗ್ಗಣಗಳೂ ಇವೆ. ಬೆಳಗಾಗುವುದರೊಳಗೆ ಈ ಹೆಣವನ್ನು ಕುಕ್ಕಿ ಚುಚ್ಚಿ ಕಡಿದು ತಿಂದು ಹಾಕಿ ಬಿಡುತ್ತವೆ" ಎಂದಳು ವೈದ್ಯನ ಹೆಂಡತಿ.

ಆದರಂತೆ ಗಂಡಹೆಂಡಿರಿಬ್ಬರೂ ಕುಳ್ಳನ ಶವವನ್ನು ಬಿಡು ಮಾಳಿಗೆಗೆ ಒಯ್ದು, ಪಕ್ಕದ ಮನೆಯ ಅಡಿಗೇ ಕೋಣೆಯ ಹಿಂದಿನಗೋಡೆಗೆ ಆತುಕೊಳ್ಳುವ ಹಾಗೆ ಅದನ್ನು ಜಾಗ್ರತೆಯಿಂದ ಕೆಳಗಿಳಿಸಿ, ಪೀಡೆ ಪರಿಹರಿಸಿಕೊಂಡವರಾಗಿ ಉಸಿರು ಬಿಟ್ಟರು.

ಮತ್ತೊಂದು ನಿಮಿಷದೊಳಗೆ ಆ ಮನೆಯವನು ಯಾವುದನ್ನೋ ಬಿಸುಡಲು ಆ ಕಡೆಗೆ ಬಂದು, ಗೋಡೆಗೆ ಒರಗಿ ಏನೋ ಇರುವುದನ್ನು ನೋಡಿ, ಮಯಣದ ಬತ್ತಿ ಬೆಳಗಿಸಿಕೊಂಡು ದೂರದಲ್ಲಿ ಓಡಿದು ಯಾವನೋ ಕದಲದೆ ನಿಂತಿರುವನೆಂದುಕೊಂಡನು.



ಅವನ ಮನೆಯ ತಿಂಡಿ ಪದಾರ್ಥಗಳು ಯಾವಾಗಲೂ ಮಾಯವಾಗುತ್ತಿದ್ದುವು. ಬೆಕ್ಕುಗಳೋ, ನಾಯಿಗಳೋ ಅವುಗಳನ್ನು ಕದಿಯುವುವೆಂದು ಅವನು ಅಂದುಕೊಳ್ಳುತ್ತಿದ್ದನು. ಈಗ ಅವನು "ಓಹೋ! ಆ ತಿಂಡಿ ಕಳ್ಳ ಇವನೇ ಸರಿ. ಒರಗಿಕೊಂಡೇ ತೂಕಡಿಸುತ್ತಿದ್ದಾನೆ. ಪಕ್ಕದ ಮನೆಯ ಬಿಡು ಮಾಳಿಗೆಯಿಂದ ಇಳಿಯುತ್ತಾನೆಂದಾಯಿತು. ಈಗ ಸಿಕ್ಕಿಬಿದ್ದ!" ಎಂದುಕೊಂಡು ದೊಣ್ಣೆ ತಂದು ಕುಳ್ಳನ ಶರೀರದ ಮೇಲೆ ಒಂದೇಟು ಕೊಟ್ಟನು. ಅದು ಮುಗುಚಿಬಿದ್ದ ಮೇಲೆ ಮತ್ತೂ ನಾಲ್ಕು ಹೊಡೆದನು.

ಅಷ್ಟು ಹೊಡೆದರೂ ಕಳ್ಳನು ನಿಶ್ಶಬ್ದ, ನಿಶ್ಚಲ! ಬಗ್ಗಿ ನೋಡಿದಾಗ ಶವ!

"ಅಯ್ಯಯ್ಯೋ! ನನ್ನ ಕೊಂಪೆ ಮುಳುಗಿಸಿದೆಯಲ್ಲೋ! ಕುಳ್ಳ ಮನುಷಾ! ನನ್ನ ಮನೆಯಲ್ಲಿ ಕದಿಯುತ್ತಾ, ನಷ್ಟಪಡಿಸಿದ್ದು ಸಾಲದೆ, ಸತ್ತರೂ



ನನ್ನ ಪ್ರಾಣಕ್ಕೆ ತಂದೆಯಾ! ಅಲ್ಲಾ! ನೀನೇ ಕಾಪಾಡಬೇಕು!" ಎಂದು ಆಚೀಚೆ ನೋಡುತ್ತಾ ಮೊರೆಯಿಟ್ಟನು.

ಅವನು ಆ ಶವವನ್ನು ಹೊತ್ತುಕೊಂಡು ಹೋಗಿ ಒಂದು ಅಂಗಡಿಯ ಮುಂದೆ ಅದನ್ನು ನಿಲ್ಲಿಸಿಟ್ಟು ತನ್ನ ಪಾಡಿಗೆ ಹೋಗಿಬಿಟ್ಟನು. ಆಗ ರಾತ್ರಿ ಬಹಳ ಭಾಗ ಕಳೆದಿತ್ತು,

ಸ್ವಲ್ಪ ಹೊತ್ತಿಗೆಲ್ಲಾ ಒಬ್ಬ ಬಡ್ಡೀ ವ್ಯಾಪಾರಸ್ಥನು ವಿಪರೀತ ಕುಡಿದು, ತಲೆಗೇರಿದ ಮತ್ತನ್ನು ಇಳಿಸಲಿಕ್ಕಾಗಿ ಸ್ನಾನ ಶಾಲೆಯ ಕಡೆಗೆ ಓಲಾಡುತ್ತಾ ನಡದು ಬಂದನು. ಅಂಗಡಿ ಬಾಗಿಲಿಗೆ ಒರಗಿ ನಿಂತಿದ್ದ ಕುಳ್ಳನು ಕಳ್ಳನಾಗಿರಬೇಕೆಂದು ಅವನಿಗೆ ಅನುಮಾನವಾಯಿತು. "ಕಳ್ಳ! ಕಳ್ಳ! ಹಿಡೀರೋ!" ಎಂದು ಅವನು ಕೂಗುತ್ತ, ಆ ಕುಳ್ಳನ ಮೇಲೆ ಹಾರಿ ಕೆಡವಿ ಕೈಯಿಂದ ಚಡಮಡನೆ ಹೊಡೆಯ ತೊಡಗಿದನು. ಆ ಕುಡುಕನ ಕೂಗನ್ನು ಕೇಳಿ, ರಾತ್ರಿಯಲ್ಲಿ ಗಸ್ತು ತಿರುಗುವ ಭಟರು ಓಡುತ್ತಾ ಬಂದು ಕೆಳಗೆ ಬಿದ್ದವನನ್ನೂ ಹೊಡೆಯುವವನನ್ನೂ ನೋಡಿದರು. ಕೆಳಗೆ ಬಿದ್ದ ಮನುಷ್ಯನಲ್ಲಿ ಜೀವವಿರಲಿಲ್ಲ.

"ನೀನು ಕೊಲೆ ಮಾಡಿರುವಿ! ವಲೀಸಾಹೇಬರ ಕಚೇರಿಗೆ ನಡೆ!" ಎಂದು ಭಟರು ಕುಳ್ಳನ ಶವವನ್ನೂ, ಕೊಲೆಗಾರನೆಂದು ನಿರ್ಣಯಿಸಿ ಬಡ್ಡೀ ವ್ಯಾಪಾರಿಯನ್ನೂ ಕೋತ್ವಾಲನ ಬಳಿಗೆ ಸಾಗಿಸಿಕೊಂಡು ಹೋದರು.

ನಡೆದ ಸಮಾಚಾರವನ್ನೆಲ್ಲಾ ಕೇಳಿ ಕೋತ್ವಾಲನು, ಬಡ್ಡೀ ವ್ಯಾಪಾರಿಯನ್ನು ಬೆಳಗಾದ ಕೂಡಲೇ ನಲ್ಲಿಗೇರಿಸಿಬಿಡುವಂತೆ ಭಟರಿಗೆ ಆಜ್ಞೆ ಮಾಡಿದನು.

ಬೆಳಗಾಗುವುಷ್ಟರಲ್ಲಿ ಪದ್ಧತಿಯಂತೆ ಬಡ್ಡೀ ವ್ಯಾಪಾರಿಯನ್ನು ಗಲ್ಲಿಗೇರಿಸುವ ಸಮಾಚಾರ ಊರಿಗೆಲ್ಲಾ ತಿಳಿಯುವಂತೆ ಡಂಗುರ ಸಾರಲಾಯಿತು. ಜನರು ಗಲ್ಲಿಗೇರಿಸುವ ಮೈದಾನಕ್ಕೆ ಗುಂಪಾಗಿ ಬರ ತೊಡಗಿದರು. ಬಡ್ಡೀ ವ್ಯಾಪಾರಿಯನ್ನು ವಧಾಸ್ಥಾನದಲ್ಲಿ ನಿಲ್ಲಿಸಿ, ಭಟರು ಅವನ ಕೊರಳಿಗೆ ಉರುಳು ಸಿಕ್ಕಿಸಲು ಸಿದ್ಧರಾದರು.

ಅಷ್ಟರಲ್ಲಿ ಸುಲ್ತಾನನ ಪಾಕಶಾಲಾಧಿಕಾರಿ ಓಡುತ್ತಾ ಅಲ್ಲಿಗೆ ಬಂದು, "ನಿಲ್ಲಿಸಿ, ನಿಲ್ಲಿಸಿ! ಆವರು ನಿರಪರಾಧಿ! ಆ ಕುಳ್ಳನನ್ನು ಕೊಂದವನು ನಾನೇ, ನಾನೇ!" ಎಂದು ಕೂಗಿದನು.

"ನೀನೇಕೆ ಕೊಲೆ ಮಾಡಿದೆ?" ಎಂದು ಕೋತ್ವಾಲನು ಕೇಳಲು, ಪಾಕಶಾಲಾಧಿಕಾರಿ ನಡೆದ ಸಂಗತಿಯನ್ನು ಹೇಳಿದನು.

"ಓಹೋ! ಈ ಮನುಷ್ಯ ತಪ್ಪನ್ನು ಒಪ್ಪಿಕೊಂಡನು. ಆದ್ದರಿಂದ ಬಡ್ಡೀ ವ್ಯಾಪಾರಿಯನ್ನು ಬಿಟ್ಟು ಇವನನ್ನು ಗಲ್ಲಿಗೇರಿಸಿರಿ!" ಎಂದು ಕೋತ್ವಾಲನು ಭಟರಿಗೆ ಅಪ್ಪಣೆಕೊಟ್ಟನು.

ಅಷ್ಟರಲ್ಲಿ ವೈದ್ಯನು ಮುಂದೆ ಬಂದು, "ಅಸಲು ಹಂತಕನು ಅವನಲ್ಲ, ನಾನೇ", ಎಂದು ತನ್ನ ಕಥೆ

ಯನ್ನು ಕೋತ್ವಾಲನೊಂದಿಗೆ ಹೇಳಿದನು. "ಹಾಗಾದರೆ ಈ ವೈದ್ಯನನ್ನು ಗಲ್ಲಿಗೆ ಹಾಕಿರಿ" ಎಂದನು ಕೋತ್ವಾಲ.

ಭಟರು ವೈದ್ಯನನ್ನು ಗಲ್ಲಿಗೆ ಹಾಕುವುದರೊಳಗೆ ದರ್ಜಿಯವನು ಮನಸ್ಸು ಕೇಳದೆ ಮುಂದೆ ಬಂದು ತಾನೇ ನಿಜವಾದ ಕೊಲೆಗಾರನೆಂಬುದನ್ನು ವಿವರಿಸಿ ಹೇಳಿದನು.

"ಆ! ಈಗ ನಿಜವಾದ ಹಂತಕನೇ ಸಿಕ್ಕಿದ. ಇವನನ್ನೇ ಗಲ್ಲಿಗೇರಿಸಿಬಿಡಿ! ಹೀಗೆ ನಿಜ ಹೊರಡುತ್ತೇ ಅಂತ ನನಗ್ಗೊತ್ತು!" ಎಂದನು ಕೋತ್ವಾಲ.

ಆದರೆ ಈ ಸಾರಿ ಕೂಡಾ ಒಂದು ಅವಾಂತರ ಬಂದಿತು. ಇಲ್ಲಿ ಸತ್ತು ಹೋದ ಕುಳ್ಳನು ಸುಲ್ತಾನರ ದರಬಾರಿಗೆ ಸೇರಿದ ವಿದೂಷಕನಾಗಿದ್ದವನು. ಮುಂಚಿನ ದಿನ ಎಲ್ಲಿಗೋ ಹೋದ ಅವನು ಹಿಂದಿರುಗಿ ಬಂದಿರಲಿಲ್ಲ; ಆದುದರಿಂದ ಬೆಳಗಾದ ಮೇಲೆ ಸುಲ್ತಾನನು ಕುಳ್ಳ ಹಾಸ್ಯಗಾರನನ್ನು ಕುರಿತು ವಿಚಾರಿಸಿದನು. ಅವನು ಸತ್ತು ಹೋದನೆಂದೂ, ಅವನನ್ನು ಕೊಂದುದಾಗಿ ನಾನು ತಾನೆಂದು ನಾಲ್ಕು ಮಂದಿ ಹೇಳಿಕೊಂಡಿದ್ದಾರೆಂದೂ ಸುಲ್ತಾನನಿಗೆ ತಿಳಿದು ಬಂತು. ಆ ನಾಲ್ಕು ಮಂದಿಗಳನ್ನೂ, ಸತ್ತ ಕುಳ್ಳ ವಿದೂಷಕನನ್ನೂ ತನ್ನ ಬಳಿಗೆ ಹಾಜರು ಪಡಿಸಬೇಕೆಂದು ಸುಲ್ತಾನನು ಕೋತ್ವಾಲನಿಗೆ ತಾಕೀದು ಕಳುಹಿಸಿದನು.

ಅದರಂತೆ ಎಲ್ಲರೂ ಸುಲ್ತಾನನ ಸಮಕ್ಷಮದಲ್ಲಿ ಹೋಗಿ ಸೇರಿದರು. ಹಂತಕರೆಂದು ಹೇಳಿಕೊಳ್ಳುವ ನಾಲ್ವರೂ ತಮ್ಮ ತಮ್ಮ ಕಥೆಯನ್ನು ಸುಲ್ತಾನನೊಂದಿಗೆ ನಿವೇದಿಸಿಕೊಂಡರು. ಎಲ್ಲರೂ ಹೇಳುವುದನ್ನು ಕೇಳಿಕೊಂಡಿದ್ದ ಕ್ಷೌರಿಕ ವೈದ್ಯನೊಬ್ಬನು, ಕುಳ್ಳ ವಿದೂಷಕನ ಶವವನ್ನು ಪರೀಕ್ಷೆಮಾಡಿ, "ವಿದೂಷಕರ ಶರೀರದಲ್ಲಿ ಇನ್ನೂ ಜೀವವಿದೆ ಪ್ರಭೂ" ಎಂದನು. ಅವನು ವಿದೂಷಕನ ಬಾಯಿಯನ್ನು ಬಲವಂತದಿಂದ ತೆರೆದು. ಗಂಟಲಿನೊಳಗೆ ಚಿಮುಟಾವೊಂದನ್ನು ಹೊಗಿಸಿ, ಅಲ್ಲಿ ಸಿಕ್ಕಿಕೊಂಡಿದ್ದ ಮೀನಿನ ತುಂಡನ್ನು ಹೊರಕ್ಕೆ ಎಳೆದನು. ಕೂಡಲೇ ಕುಳ್ಳನು ಜೋರು ಜೋರಾಗಿ ಸೀನುತ್ತ ಎದ್ದು ಕುಳಿತು, ಮುಖವನ್ನೂ. ಕುತ್ತಿಗೆಯನ್ನೂ ಆಡಿಸಿ, ಹಾರಿ ಎದ್ದು ನಿಂತನು.

ಈ ವಿಧವಾಗಿ ಎಲ್ಲರ ಕಷ್ಟಗಳೂ ತೀರಿ ಹೋದುವು. ಸುಲ್ತಾನನು ಕ್ಷೌರಿಕ ವೈದ್ಯನಿಗೆ ದೊಡ್ಡ ಬಹುಮಾನವನ್ನು ಕೊಟ್ಟನು. ಹಾಗೆಯೇ ಸುಲ್ತಾನನಿಂದ ಬಹುಮಾನಗಳನ್ನು ಪಡೆದು ಇತರ "ಹಂತಕರೂ" ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

### ಗೆದ್ದ ಶೀರ್ಷಿಕೆಗಳು ೧೯೮೪ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.







Shantaram | Mohan D. Desai

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಫೆಬ್ರುವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂ. ೫೦ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟ್‌ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಡಿಸೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಇದರಲ್ಲಿ ಹಾಕಿದರೆ ಮುದ್ರೆ ಗುದ್ದುತ್ತಾರೆ

ಎರಡನೇ ಫೋಟೋ : ಈಗ ಆ ಗುದ್ದಿನ ನೋವು ನನಗೇ ನಿಲ್ಲಪ್ಪ!

ಕಳುಹಿಸಿದವರು : ಬಿ. ತೇಜೇಶ್ವರ, ಗವರ್ನ್‌ಮೆಂಟ್ ಹೈ ಸ್ಕೂಲ್, ೬೦೦೦೨೪.

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.